ಕನ್ನಡ ಕಾವ್ಯಮಾಲೆ—೧

# ಕಿಂದರಿ ಜೋಗಿ

ಮತ್ತು

## ಇತರ ಕಥನ ಕವನಗಳು

ಶ್ರೀಮಾನ್
ಬಿ. ಎಂ. ಶ್ರೀಕಂಠಯ್ಯನವರ
ಮುನ್ನುಡಿಯೊಡನೆ

**ಕೆ. ವಿ. ಪುಟ್ಟಪ್ಪ**



ಶಿವಮೊಗ್ಗ :
**ಕಾವ್ಯಾಲಯ**
೧೯೩೬

# ಮುನ್ನುಡಿ

ಶ್ರೀಮಾನ್ ಪುಟ್ಟಪ್ಪನವರ ಕವನಗಳನ್ನು ಓದಿ ಆನಂದಪಡದ ಕನ್ನಡಿಗನಿರಲಾರನು. ಅವರ 'ಕಿಂದರಿ ಜೋಗಿ'ಯನ್ನು ಹಾಡದ ಚಿಕ್ಕ ಮಕ್ಕಳಿಲ್ಲ; 'ತಾನಾಜಿ'ಯ ವೀರರಸಕ್ಕೆ ಕಾವೇರದ ಎಳೆಯರಿಲ್ಲ; ಮಲೆನಾಡಿನ ದಿವ್ಯ ಸೌಂದರ್ಯವನ್ನೂ ಶಾಂತ ಗಾಂಭೀರ್ಯವನ್ನೂ ಎದೆಗೊಳ್ಳದ ಹಿರಿಯರಿಲ್ಲ.

ಪುಟ್ಟಪ್ಪನವರ ತೂಗುದೊಟ್ಟಿಲಾದ ಮಲೆನಾಡಿನ ಪ್ರಭಾವದ ಮಡಿಲಲ್ಲಿ ಒಮ್ಮೆ ನನ್ನನ್ನು ಹಾಕುವುದಾಗಿ ಅವರು ಆಸೆದೋರಿದ್ದ ಕನಸು ಮೊನ್ನೆ ಬೇಸಗೆಯ ಬಿಡುವಿನಲ್ಲಿ ಕಣ್ಣು ತುಂಬಿತು. ಅವರೂ ಅವರ ಬಂಧುಗಳೂ ಉತ್ಸಾಹಮೂರ್ತಿಗಳೂ ಆದ ಶ್ರೀಮಾನ್ ಮಾನಪ್ಪನವರೂ ಅವರ ಕಡೆಯ ಮಲೆನಾಡಿನ ಒಕ್ಕಲಿಗರ ಮೇಲ್ಮೆಗಾಗಿ ನಡಸುತ್ತಿರುವ ಭಕ್ತಿ ಕೈಂಕರ್ಯವನ್ನು ನೋಡಿ ನಲಿದೆನು. ಪುಟ್ಟಪ್ಪನವರು ನೆಟ್ಟ ಶಿವಮೊಗ್ಗೆಯ ಕರ್ಣಾಟಕ ಸಂಘದ ಆಶ್ರಯದಲ್ಲಿ ಸಂಚಾರ ಮಾಡಿ ಮಲೆನಾಡಿನ ನಗರಗಳ ಹಲವರು ಕನ್ನಡ ಪ್ರೇಮಿಗಳಾದ ಹಿರಿಯರ ಮತ್ತು ಶಿಷ್ಯರ ಪ್ರೀತಿ ಸಂತೋಷವನ್ನು ಸಂಪಾದಿಸಿಕೊಂಡೆನು. ತುಂಗೆಯ ತೆರೆಗಳು ಈಗಲೂ ನನ್ನೆದೆಯಲ್ಲಿ ದುಮುಕುತ್ತಿವೆ.

ಇಷ್ಟು ಬೇಗ ಮತ್ತೊಮ್ಮೆ ಪುಟ್ಟಪ್ಪನವರೂ ಮಾನಪ್ಪನವರೂ ಮತ್ತೊಂದು ಕೃತಜ್ಞತೆಯ ಸುಖದ ಭಾರವನ್ನು ನನ್ನ ಮೇಲೆ ಹೊರಿಸುವರೆಂದು ನಾನು ಎಣಿಸಿರಲಿಲ್ಲ. ಹೂವಿನ ಜೊತೆಯಲ್ಲಿ ನಾರು ಮತ್ತೊಮ್ಮೆ ಸ್ವರ್ಗಕ್ಕೆ ಸಲ್ಲುವ ಪುಣ್ಯ ಲಭಿಸುವುದೆಂದು ನೆನಸಿರಲಿಲ್ಲ.

ಈಗ, ಹೊಸದಾಗಿ, ಶಿವಮೊಗ್ಗೆಯಲ್ಲಿ "ಕನ್ನಡ ಕಾವ್ಯಮಾಲೆ"ಯ ಪ್ರಕಟನೆಯ ಉದ್ದೇಶದಿಂದ "ಕಾವ್ಯಾಲಯ" ಎಂಬ ಬೇರೊಂದು ಸಂಸ್ಥೆ

ಏರ್ಪಟ್ಟಿದೆ. ಕನ್ನಡಿಗರಿಗೆ ಸುಲಭ ಕ್ರಯದಲ್ಲಿ ಒಳ್ಳೆಯ ಗ್ರಂಥಗಳನ್ನು ಒದಗಿಸುವುದು ಇದರ ಗುರಿ. ಪುಟ್ಟಪ್ಪನವರ ಗ್ರಂಥಗಳೇ ಇದರ ಮೊದಲನೆಯ ಆಧಾರ. ಈ "ಕಾವ್ಯಾಲಯ"ದ ಮುದ್ರಣಗಳು ಕನ್ನಡಿಗರಿಗೆ ಇಷ್ಟವಾಗುವುವೆಂದೂ, ಅವರು ಅವಕ್ಕೆ ಉತ್ತೇಜನಕೊಡುವರೆಂದೂ ನಾನು ನಂಬಿದ್ದೇನೆ.

ಕನ್ನಡಿಗರು ಒಂದು ಸಂಗತಿಯನ್ನು ಮರೆಯಬಾರದೆಂದು ನನ್ನ ಬಿನ್ನಹ. ಈ ಕ್ರಾಂತಿಯುಗದಲ್ಲಿ ಕನ್ನಡ ಕೊಚ್ಚಿಹೋಗುವ ಸಂಭವವುಂಟು. ನಮ್ಮ ಹಿರಿಯರು ಕನ್ನಡ ದೇವಿಯನ್ನು ತೇರಿನಲ್ಲಿ ಬಿಜಯಮಾಡಿಸಿ ಭಕ್ತಿ ಕಾಣಿಕೆಗಳನ್ನು ಸಲ್ಲಿಸಿದರು. ಈಗ ರಥ ಇಕ್ಕಟ್ಟಿನಲ್ಲಿ ಬಂದು ನಿಂತಿದೆ: ಮುಂದಕ್ಕೆ ಎಳೆಯುವುದೇ, ಇದ್ದಲ್ಲಿ ಬಿಟ್ಟು ತೆರಳುವುದೇ—ಈ ಪ್ರಶ್ನೆ ಕನ್ನಡಿಗರಲ್ಲಿ ಮಿಡಿಯುತ್ತಿದೆ. ಪೂರ್ವಕಾಲದ ರಾಜರು, ಮಠಾಧಿಪತಿಗಳು, ಶ್ರೀಮಂತರು ತಾಯಿಗೆ ಹೊಂದೊಡಿಗೆಯನ್ನು ತೊಡಿಸಿ, ಹೊಮ್ಮುಡಿಯನ್ನು ತಲೆಯಲ್ಲಿಟ್ಟು, ಕೈಗೆ ಹೊಂಗೋಲನ್ನು ಕೊಟ್ಟರು. ಈಗ ಐವತ್ತು ವರ್ಷಗಳಿಂದ ಇಂಗ್ಲಿಷ್ ವಿದ್ಯಾಭ್ಯಾಸದ ಫಲವಾಗಿ ಹೊಸ ಚೈತನ್ಯ, ಹೊಸ ದೇಶಾಭಿಮಾನ, ಭಾಷಾಭಿಮಾನಗಳು ಚಿಗುತು ಹೊಸ ಜೀವನಕ್ಕೆ ತಕ್ಕಂತೆ ಜನತೆಗೆಲ್ಲಾ ತಕ್ಕ ಸಾಹಿತ್ಯ ಸೃಷ್ಟಿ ನಡೆಯುತ್ತಿದೆ. ಆದರೆ ಕನ್ನಡಿಗರಿಗೆ ಒಂದು ಕಟ್ಟಿಲ್ಲ: ಒಂದು ದೃಷ್ಟಿಯಿಲ್ಲ. ಕನ್ನಡಿಗರು ಒಡೆದಿದ್ದಾರೆ: ಒಡಕು ಬೆಳೆಯುತ್ತಲೂ ಇದೆ: ವಿದ್ಯೆಯಲ್ಲಿ, ಜ್ಞಾನ ಪ್ರಚಾರದಲ್ಲಿ, ಸಾಹಿತ್ಯದಲ್ಲಿ, ಕನ್ನಡ ದೇಶದ ಎಲ್ಲಾ ಕಾರ್ಯಸ್ಥಾನಗಳಲ್ಲಿ ಕನ್ನಡಕ್ಕಿರಬೇಕಾದ ಪ್ರಧಾನ ಸ್ಥಾನವನ್ನು ಕೊಡಬೇಕೆಂದು ಹೋರಾಡುವವರು ಕೆಲವು ಮಂದಿ ಮಾತ್ರ. ಕನ್ನಡ ನಾಡಿಗೆ ಕನ್ನಡವನ್ನು ಬಿಟ್ಟು ಗತಿಯಿಲ್ಲ; ಕನ್ನಡ ನುಡಿಯನ್ನು ಬಿಟ್ಟು ಕನ್ನಡ ನಾಡು ಮತ್ತೆ ರೂಪುಗೊಳ್ಳುವಂತಿಲ್ಲ ಎಂಬ ಜೀವಾಳವನ್ನು ಜನವಿನ್ನೂ ಚೆನ್ನಾಗಿ ಮನವಟ್ಟು ಮಾಡಿಕೊಂಡಿಲ್ಲ. ಇಂತಹ ದುರ್ದೆಸೆಯಲ್ಲಿ ಕನ್ನಡಿಗರಿಗಾಗಿ ಕನ್ನಡದಲ್ಲಿ ಆಕರ್ಷಣೆಮಾಡುವ ಪುಸ್ತಕಗಳನ್ನು ಬರೆಯುವವರೂ, ಅಚ್ಚಿಟ್ಟು ಒದಗಿಸುವವರೂ ಕನ್ನಡಿಗರ ಹಿತಚಿಂತಕರು. ಅವರಿಗೆ ಕನ್ನಡಿಗರು ಬೆಂಬಲವಾಗಿ ನಿಲ್ಲಬೇಕು.

ಪುಟ್ಟಪ್ಪನವರ ಕವಿತಾ ಶಕ್ತಿಯೂ, ಶಿವಮೊಗ್ಗೆಯ ಕರ್ಣಾಟಕ ಸಂಘದ ಮತ್ತು "ಕಾವ್ಯಾಲಯ"ದ ಸೇವಾ ಶಕ್ತಿಯೂ ಕನ್ನಡಿಗರ ಕನ್ನಡದ ಭಕ್ತಿಯೂ ವರ್ಧಿಸಲೆಂದು ಭಗವಂತನಲ್ಲಿ ಪ್ರಾರ್ಥಿಸುತ್ತೇನೆ.

ಬೆಂಗಳೂರು,
೬–೮–೧೯೩೬.

ಬಿ. ಎಂ. ಶ್ರೀಕಂಠಯ್ಯ

# ಅರಿಕೆ

ಈಗ ಐವತ್ತು ವರ್ಷಗಳಿಂದ ಇಂಗ್ಲಿಷ್ ವಿದ್ಯಾಭ್ಯಾಸದ ಫಲವಾಗಿ ದೇಶದಲ್ಲಿ ಹೊಸ ಚೈತನ್ಯ, ಹೊಸ ದೇಶಾಭಿಮಾನ, ಭಾಷಾಭಿಮಾನಗಳು ಮೂಡುತ್ತಿವೆ. ಜನಾಂಗದ ಜೀವನದಲ್ಲಿ ಹೊಸ ಯುಗವೊಂದು ಆರಂಭವಾಗಿದೆ. ಈ ಹೊಸ ಜೀವದ ಹೊಸ ಧ್ಯೇಯದ ಪ್ರಭಾವ ಸಾಹಿತ್ಯಕ್ಷೇತ್ರದಲ್ಲಿಯೂ ಕಂಡುಬರುತ್ತಿದೆ. ಈ ಪ್ರಭಾವದ ಫಲವಾಗಿ, ಒಂದೆಡೆ—ನಮ್ಮ ಹಿರಿಯರು ಹಿಂದೆ ಪೋಷಿಸಿ ಬೆಳೆಸಿದ ಪುರಾತನ ಸಾಹಿತ್ಯ ಬೆಳಕಿಗೆ ಬರುತ್ತಿದೆ. ಇನ್ನೊಂದೆಡೆ—ಹಿಂದೆ ಒಬ್ಬನು ಕಲಿಯುತ್ತಿದ್ದ ಕಡೆ ಈಗ ಹತ್ತಾರು ಜನ ಕಲಿಯುತ್ತಿದಾರೆ, ಓದುತ್ತಿದಾರೆ. ಇದರಿಂದ ಜನರ ಅಭಿಲಾಷೆಗಳು, ರುಚಿಗಳು, ಜೀವನ ವ್ಯಾಪಾರಗಳು ಬದಲಾಯಿಸುತ್ತಿವೆ, ಬಹುಮುಖವಾಗುತ್ತಿವೆ. ಜೀವನ ಬಹುಮುಖವಾದಂತೆ ಸಾಹಿತ್ಯ ಬಹುರೂಪವಾಗುತ್ತಿದೆ, ವಿಪುಲವಾಗುತ್ತಿದೆ: ಲೇಖಕರ ಸಂಖ್ಯೆ ಹೆಚ್ಚುತ್ತಿದೆ; ಬರೆಯುವ ಪುಸ್ತಕಗಳ ಸಂಖ್ಯೆ ಏರುತ್ತಿದೆ.

ಹೀಗೆ ಸರ್ವತೋಮುಖವಾಗಿ ಬೆಳೆಯುತ್ತಿರುವ ಜ್ಞಾನಭಂಡಾರವನ್ನು ಸಾಧ್ಯವಾದಮಟ್ಟಿಗೆ ಪ್ರಕಾಶಕ್ಕೆ ತರುವುದೇ "ಕಾವ್ಯಾಲಯ" ಸಂಸ್ಥೆಯ ಉದ್ದೇಶ. ಇದರ ಅಂಗವಾಗಿ "ಕನ್ನಡ ಕಾವ್ಯಮಾಲೆ" ಎಂಬ ಗ್ರಂಥಮಾಲೆ ಹೊರಟಿದೆ. ಈ ಮಾಲೆಯ ಗುರಿ: ಕನ್ನಡಿಗರಿಗೆ ಉಪಯುಕ್ತವಾದ ಕಥೆ–ಕವನ–ಕಾದಂಬರಿ–ನಾಟಕ–ಪ್ರಬಂಧ, ಇತ್ಯಾದಿ ವಿಷಯಕ ಉತ್ತಮ ಗ್ರಂಥಗಳನ್ನು ಅಂದವಾಗಿ ಪ್ರಕಟಿಸಿ ಸುಲಭ ಬೆಲೆಗೆ ದೊರಕಿಸಿ ಕೊಡಬೇಕೆಂಬುದು. ಆದ್ದರಿಂದ ಈ ಮಾಲೆಯ ವಾರ್ಷಿಕ ಚಂದಾ ಅಂಚೆ ವೆಚ್ಚ ಸೇರಿ ಕೇವಲ ನಾಲ್ಕು ರೂಪಾಯಿ ಎಂದು ಗೊತ್ತುಮಾಡಿದೆ. ಈ ಮಾಲೆಯಲ್ಲಿ ಪ್ರತಿ ವರ್ಷ ಕ್ರೌನ್ ಅಷ್ಟಪತ್ರ ಆಕಾರದ ಸುಮಾರು ನೂರು ಪುಟಗಳುಳ್ಳ ಆರು ಪುಸ್ತಕಗಳು ಪ್ರಕಟವಾಗುತ್ತವೆ.

ಈ ವರ್ಷದ ಮಾಲೆಯಲ್ಲಿ ಶ್ರೀಮಾನ್ ಪುಟ್ಟಪ್ಪನವರ—೧. ಕಿಂದರಿ ಜೋಗಿ ಮತ್ತು ಇತರ ಕಥನಕವನಗಳು. ೨. ಸಂನ್ಯಾಸಿ ಮತ್ತು ಇತರ

ಕಥೆಗಳು. ೩. ಚಿತ್ರಾಂಗದಾ (ಸರಳರಗಳೆಯ ಮಹಾಕಾವ್ಯ). ೪, ೫, ೬. ಕಾನೂರು ಸುಬ್ಬಮ್ಮ ಹೆಗ್ಗಡಿತಿ (ಕಾದಂಬರಿ)—ಈ ಆರು ಪುಸ್ತಕಗಳು ಪ್ರಕಟವಾಗುತ್ತವೆ. ಇವುಗಳಲ್ಲಿ ಮೊದಲನೆಯ ಗ್ರಂಥವು ಸಿದ್ಧವಾಗಿರುವುದು ಸರಿಯಷ್ಟೆ. ಎರಡು ಮೂರನೆಯ ಗ್ರಂಥಗಳು ಅಚ್ಚಿನಲ್ಲಿವೆ; ನವರಾತ್ರಿಯ ಹಬ್ಬದವೊಳಗೆ ಸಿದ್ಧವಾಗುತ್ತವೆ. ೪, ೫, ೬ನೆಯ ಪುಸ್ತಕಗಳಾದ 'ಕಾನೂರು ಸುಬ್ಬಮ್ಮ ಹೆಗ್ಗಡಿತಿ' ಎಂಬ ಕಾದಂಬರಿಯ ಮೊದಲ ಮೂರು ಭಾಗಗಳು (ಒಟ್ಟಿನಲ್ಲಿ ಸುಮಾರು ೩೨೦ ಪುಟಗಳು) ಇದೇ ವರ್ಷದ ಅಕ್ಟೋಬರ್, ನವೆಂಬರ್, ಡಿಸೆಂಬರ್ ತಿಂಗಳುಗಳಲ್ಲಿ ಕ್ರಮವಾಗಿ ಸಿದ್ಧವಾಗಬಹುದಾಗಿ ನಿರೀಕ್ಷಿಸಿದೆ. ಈ ಬೃಹತ್ ಕಾದಂಬರಿಯ ಇತರ ಭಾಗಗಳು ಮುಂದಿನ ವರ್ಷದ ಮಾಲೆಯಲ್ಲಿ ಪ್ರಕಾಶಿತವಾಗುತ್ತವೆ.

ಈ ಮಾಲೆಯ ಪುರೋಭಿವೃದ್ಧಿಯನ್ನು ಕೋರಿ ಈ ಗ್ರಂಥಕ್ಕೆ ಮುನ್ನುಡಿಯೊಂದನ್ನು ಬರೆದುಕೊಟ್ಟು ಉಪಕಾರ ಮಾಡಿರುವ ಪೂಜ್ಯ ಶ್ರೀಮಾನ್ ಬಿ. ಎಂ. ಶ್ರೀಕಂಠಯ್ಯ, ಎಂ.ಎ., ಬಿ.ಎಲ್., ಅವರಿಗೆ ನಾವು ವಿಶೇಷ ಕೃತಜ್ಞರು.

ಭಗವತ್ಕೃಪೆಯಿಂದಲೂ ಕನ್ನಡಿಗರ ಉದಾರಾಶ್ರಯದಿಂದಲೂ ಈ ಮಾಲೆ ಬೆಳೆಯುತ್ತಾ ಬರಲೆಂದು ಪ್ರಾರ್ಥನೆ.

ಶಿವಮೊಗ್ಗಾ,
೯-೮-೧೯೩೬.

**ಪ್ರಕಾಶಕರು**

# ವಿವರ

# ಬೊಮ್ಮನಹಳ್ಳಿಯ ಕಿಂದರಿ ಜೋಗಿ*

ತುಂಗಾತೀರದ ಬಲಗಡೆಯಲ್ಲಿ
ಹಿಂದಲ್ಲಿದ್ದುದು ಬೊಮ್ಮನಹಳ್ಳಿ.
ಅಲ್ಲೇನಿಲಿಗಳ ಕಾಟವೆ ಕಾಟ!
ಅಲ್ಲಿಯ ಜನಗಳಿಗತಿಗೋಳಾಟ!
ಇಲಿಗಳು ಬಡಿದುವು ನಾಯಿಗಳ!
ಇಲಿಗಳು ಕಡಿದುವು ಬೆಕ್ಕುಗಳ!
ಕೆಲವನು ಕೊಂದುವು, ಕೆಲವನು ತಿಂದುವು,
ಕೆಲವನು ಬೆದರಿಸಿ ಹಿಂಬಾಲಿಸಿದುವು.
ಅಲ್ಲಿಯ ಮೂಷಿಕನಿಕರವು ಸೊಕ್ಕಿ
ಎಲ್ಲರ ಮೇಲೆಯು ಕೈಬಾಯಿಕ್ಕಿ
ಹೆದರಿಕೆಯಿಲ್ಲದೆ, ಬೆದರಿಕೆಯಿಲ್ಲದೆ
ಕುಣಿದುವು ಯಾರನು ಲೆಕ್ಕಿಸದೆ!
ಹಾಲಿನ ಮಡಕೆಯನೊಡೆದುವು ಕೆಲವು;
ಅನ್ನದ ಗಡಿಗೆಯ ಪುಡಿಮಾಡಿದುವು.
ಬಡಿಸುವ ಅಡುಗೆಯ ಭಟ್ಟನ ತಡೆದು,
ಕೈಯಲ್ಲಿರುವಾ ಸಟ್ಟುಗವ
ಭೀತಿಯೆ ಇಲ್ಲದೆ ನೆಕ್ಕಿದುವು;
ಈ ಪರಿ ತಿನ್ನುತ ಸೊಕ್ಕಿದುವು;
ಧಾನ್ಯವನೆಲ್ಲಿಯು ಬಿಕ್ಕಿದುವು!
ಟೋಪಿಯ ಒಳಗಡೆ ಗೂಡನು ಮಾಡಿ
ಹೆತ್ತುವು ಮರಿಗಳನು;
ಪೇಟದ ಒಳಗಡೆ ಆಟವನಾಡಿ
ಕಿತ್ತುವು ಸರಿಗೆಯನು!

---

* ಬ್ರೌನಿಂಗ್ ಕವಿಯ 'The Pied Piper of Hameline' ಎಂಬ ಕವಿತೆಯ ಆಧಾರದ ಮೇಲೆ ರಚಿತವಾದದ್ದು.

ಗೋಡೆಗೆ ತಗುಲಿಸಿದಂಗಿಯ ಜೇಬನು
ದಿನವೂ ಜಪ್ತಿಯ ಮಾಡಿದುವು!
ಮಲಗಿರೆ ಹಾಸಿಗೆಯನ್ನೇ ಹರಿದುವು
ಕೇಶಚ್ಛೇದವ ಮಾಡಿದುವು!
ಬೆಣ್ಣೆಯ ಕದ್ದುವು, ಬೆಲ್ಲವ ಮೆದ್ದುವು
ಎಣ್ಣೆಗೆ ಬಿದ್ದುವು ದಿನದಿನವು!
ಗೌಡರು ಮಾತಾಡುತ ಕುಳಿತಲ್ಲಿ
ಬಹಳ ಗಲಾಟೆಯ ಮಾಡಿದುವು!
ಗರತಿಯರಾಡುವ ಹರಟೆಗೆ ತುಂಬಾ
ತೊಂದರೆಯಿತ್ತುವು ಗಜಿಬಿಜಿಮಾಡಿ.
ಊರಿನ ಮಕ್ಕಳ ಕೈಲಿದ್ದ
ತಿಂಡಿಯ ಕಸಿದುವು ಧೈರ್ಯದಲಿ!

ಇಲಿಗಳ ಕೊಲ್ಲಲು ಊರಿನ ಜನರು
ತುಂಬಾ ಯತ್ನವ ಮಾಡಿದರು;
ಕಡಿದರೆ ಮುರಿದುವು ಕತ್ತಿಗಳೆಲ್ಲಾ,
ಹೊಡೆದರೆ ಮುರಿದುವು ಕೋಲುಗಳು.
ಇಲಿಗಳ ಬೇಟೆಯನಾಡುತಲಿರಲು
ಮುರಿದುವು ತಿಮ್ಮನ ಕಾಲುಗಳು!
ಬೇಟೆಯನಾಡಲು ಅಡುಗೆಯ ಮನೆಯಲಿ
ಬಿದ್ದಳು ಬಳೆಯೊಡೆದಜ್ಜಮ್ಮ!
ಭೃಂಗಾಮಲಕದ ತೈಲವ ಹಚ್ಚಿದ
ಶೇಷಕ್ಕನ ನುಣ್ಣನೆ ಫಣಿವೇಣಿ,
ಬೆಳಗಾಗೇಳುತ ಕನ್ನಡಿ ನೋಡೆ
ಇಲಿಗಳಿಗಾಗಿತ್ತೂಟದ ಪೇಣಿ!
ರಾತ್ರಿಯ ವೇಳೆಯಲೋಡುತ ಕೊಟ್ಟಿಗೆ-
ಗುಂಡುವು, ತಿಂದುವು ದನಗಳ ಕೆಚ್ಚಲ,
ಹರಿದುವು ಕರುಗಳ ಬಾಲಗಳ!

ಸಿದ್ದೋಜೈಗಳು ಶಾಲೆಗೆ ಹೋಗಿ
ಪಾಠವ ಬೋಧಿಸುತಿದ್ದಾಗ,
ಅಂಗಿಯ ಜೇಬಿಂ ಹೆಳವಿಲಿಯೊಂದು
ಚಂಗನೆ ನೆಗೆಯಿತು ತೂತನು ಮಾಡಿ.
ಲೇವಡಿ ಎಬ್ಬಿಸೆ ಬಾಲಕರಾಳಿ
ಗುರುಗಳಿಗಾಯಿತು ಬಲುಗೇಲಿ!
ಹರಿಯಲು ರೇಶ್ಮೆಯ ರವಕೆಯ ಕಣಗಳ,
ಕೊಚ್ಚಲು ಕಾಗಿನ ಸೀರೆಯನು,
ಮುಂಗಾಣದೆ ಜಟ್ಟಕ್ಕನು ಹೋಗಿ
ಬತ್ತಿದ ಕೆರೆಯನು ಹಾರಿದಳು;
ಸತ್ತೇ ಎನ್ನುತ ಚೀರಿದಳು!
ಬೆಳಗಿನ ಜಾವದಿ ಏಳುತ ನೋಡಲು
ಭಟ್ಟಾಚಾಸ್ತ್ರಿಯ ಜನಿವಾರ
ಇಲಿಗಳಿಗಾಗಿತ್ತಾಹಾರ!
ಒಂದಿಲಿ ಸತ್ತರೆ ಎರಡಿಲಿಯಾದುವು,
ಕೊಂದರೆ ಒಂದನು ಎರಡೈತಂದುವು!
ಇಲಿಗಳ ಕಾಟವ ಸಹಿಸಲು ಆರದೆ
ಊರಿನ ಜನರೆಲ್ಲರು ಒಂದಾಗಿ
ಮೂಷಿಕಯಾಗವ ಮಾಡಿದರು,
ದೇವರ ಪೂಜೆಯ ಮಾಡಿದರು,
ಹರಕೆಯ ಹೊತ್ತರು, ಕಾಣಿಕೆ ತೆತ್ತರು,
ಮಂತ್ರವ ದಿನದಿನ ಹೇಳಿದರು!
ನಿಷ್ಫಲವಾದುವು ಮಂತ್ರಗಳೆಲ್ಲಾ,
ಬಾಯ್ ಬಾಯ್ ಕಳೆದರು ಶಾಸ್ತ್ರಿಗಳೆಲ್ಲಾ,
ಕಣ್ ಕಣ್ ಬಿಟ್ಟರು ಪಂಡಿತರೆಲ್ಲಾ,
ಕಂಬನಿಗರೆದರು ಜನರೆಲ್ಲಾ!
ಮುಂದಿನ ಮಾರ್ಗವ ಕಾಣದೆ ಜನರು,
ಗೌಡನ ಬಳಿ ಹೋದರು ಗುಂಪಾಗಿ:

ಗೌಡನು ಮನೆಯಿಂದೀಚೆಗೆ ಬಂದನು
ಕಂಗಳನರಳಿಸಿ ಬೆರಗಾಗಿ!
ಕೂಗಿದರೆಲ್ಲರು ಗೌಡನ ಕುರಿತು,
ಗೌಡನು ನಿಂತನು ಮೈಮರೆತು:
"ಥೂ! ಛೀ! ಗೌಡನೆ ನೀ ಹಾಳಾಗ!
ಮಾರಿಯ ಇಲಿಗಳ ಕೊಲ್ಲಿಸೊ ಬೇಗ!
ತೆರಿಗೆಯ ಮಾತ್ರಾ ಕಾಸೂ ಬಿಡದೆ
ಹೊಡೆದೂ ಬೈದೂ ಎತ್ತುವೆ ನೀನು.
ನಿನ್ನ ರುಮಾಲಿನ ಜರಿ ಹಾಳಾಗ,
ನಿನ್ನೀ ಗಂಟಲು ಕಟ್ಟೀ ಹೋಗ!
ಇಲಿಗಳ ಸಹಿಸೆವು ಕೊಲ್ಲಿಸೊ ಬೇಗ!
ಬೆಂಕಿಯನಿಡುವೆವು ನಿನ್ನೀ ಮನೆಗೆ,
ಕೊಲ್ಲಿಸದಿರೆ ಬರೆಯಿಡುವೆವು ನಿನಗೆ!
ಹೆಸರಿಗೆ ಮಾತ್ರಾ ಗೌಡನೆ ನೀನು?
ಮಾನವೆ ಇಲ್ಲವೆ, ಛೀ! ನಿನಗೇನು!"

ಈ ಪರಿ ಬೈದರು ಜನರೆಲ್ಲಾ;
ಗೌಡನು ಬಾಯೇ ಬಿಡಲಿಲ್ಲಾ!
ಜನರೆಲ್ಲಾ ಹಿಂತಿರುಗಿದ ಮೇಲೆ
ಗೌಡನು ಓಡಿದ ಚಾವಡಿಗೆ;
ಕರೆದನು ಊರಿನ ತಲೆಯಾಳುಗಳ;
ಕಟ್ಟೆಯೊಳಲ್ಲಿಯೆ ಸಭೆ ಸೇರಿದರು.
ದಿನವೆಲ್ಲಾ ಚರ್ಚೆಯ ಮಾಡಿದರು;
ದಿನವೆಲ್ಲಾ ವಾದವ ಹೂಡಿದರು.
ಹೊರಟವು ಯುಕ್ತಿಯ ಮಾತುಗಳು,
ಮಾತೊಳು ಮನೆಯನು ಕಟ್ಟಿದರು.
ಅಂತೂ ಇಲಿಗಳ ಕೊಲ್ಲುವ ಬಗೆಯು
ಒಬ್ಬರಿಗಾದರು ಹೊಳೆಯಲೆ ಇಲ್ಲ.

ಗೌಡನು ತಲೆತಲೆ ಹೊಡಕೊಂಡ ;
ಅಲ್ಲದೆ ಎದೆಯೆದೆ ಬಡಕೊಂಡ :
ಕಡೆಗಾ ರಂಗೇಗೌಡನು ಊರಿಗೆ
ಬೆಂಕಿಯ ಹಾಕುವ ಸಲಹೆಯ ಕೊಟ್ಟ !
ಊರನೆ ಖಂಡಿತ ಬಿಡಬೇಕೆಂದು
ರಾಮಾಶಾಸ್ತ್ರಿಗಳಾಡಿದರು !
ತಿಪ್ಪಂಭಟ್ಟರು ಚಿಂತಿಸಿ ಚಿಂತಿಸಿ
'ದೇವರು ಮಾಡಿದುದಾಗಲಿ' ಎಂದರು !
ಸಲಹೆಗಳೆಲ್ಲಾ ಮುಗಿದಾ ಮೇಲೆ
ಗೌಡನು ಜನರನು ಕುರಿತಿಂತೆಂದ:
'ಇಲಿಗಳ ನಾಶಕುಪಾಯವನಾರು
ತೋರಿಸಿ ಕೊಡುವರೊ ಅವರಿಗೆ ಆರು
ಸಾವಿರ ನಾಣ್ಯಗಳೀಯುವೆ ನಾನು ;
ತಿಳಿದವರಿದ್ದರೆ ಬನ್ನಿರಿ! ಏನು ?'

ಒಬ್ಬರ ಮೊಗವನು ಒಬ್ಬರು ನೋಡಿ
ಮಾತಾಡದೆ ಇದ್ದರು ಜನರೆಲ್ಲಾ !
ಗೌಡನು ಕೂಗಿದ ಮೊದಲನೆ ಸಾರಿ;
ಯಾರೂ ಮುಂದಕೆ ಬಾರಲೆ ಇಲ್ಲ.
ನಾಣ್ಯಗಳೆಂಬಾ ಮಾತನು ಕೇಳಿ
ಮಂಗೈಶೆಟ್ಟರು ಕೋಪವ ತಾಳಿ
ಬ್ರಹ್ಮನ ರಾಣಿಯ ದೂರಿದರು !
ಮೆದುಳನು ನೀಡದೆ ತಲೆಯನು ಮಾಡಿದ
ಕಮಲಜನನು ಬೈದಾಡಿದರು !
ಸುತ್ತಲು ನೋಡುತ ಗೌಡನು ಮತ್ತೆ
ಎರಡನೆ ಸಾರಿಯು ಕೂಗಿದನು.
ಆಸೆಯನೆಲ್ಲವ ನೀಗಿದನು !
ಕೂಗಿದನಾತನು ಮೂರನೆ ಸಾರಿ;

ಮಾತೇ ಇಲ್ಲವು, ಎಲ್ಲಿಯು ಮೌನ!
ಮುಂದಲೆ, ಹಿಂದಲೆ ಎರಡನು ಉಜ್ಜುತ,
ಕಂಗಳ ಕೆರಳಿಸಿ, ಹಲ್ಲನು ಕಡಿಯುತ,
ಶೆಟ್ಟರು ಬಲು ಪೇಚಾಡಿದರು.
ಆವೇಶವ ದಯಪಾಲಿಸು ಎನ್ನುತ
ವಾಣಿಯ ಪರಿಪರಿ ಬೇಡಿದರು!

ಏನಿದು ಗುಜುಗುಜು ಗುಂಪಿನಲಿ?
ನೋಡಿದಿರೇನಾಶ್ಚರ್ಯವನು?
ಆಲಿಸಿ! ದೂರದ ಕಿಂದರಿ ನಾದ!
ಬರುವನು ಯಾರೋ ಕಿಂದರಿ ಜೋಗಿ!
ಹತ್ತಿರ, ಹತ್ತಿರಕವನೈತಂದ;
ಬಂದಿತು ಜನರಿಗೆ ಒಂದಾನಂದ!
ನೋಡಿರಿ! ನೋಡಿರಿ, ಕಿಂದರಿ ಜೋಗಿ!
ನೋಡಿದರೆಲ್ಲರು ಬೆರಗಾಗಿ!
ಬಂದನು! ಬಂದನು ಕಿಂದರಿ ಜೋಗಿ!
ಕೆದರಿದ ಕೂದಲ ಗಡ್ಡದ ಜೋಗಿ!
ನಾನಾ ಬಣ್ಣದ ಬಟ್ಟೆಯ ಜೋಗಿ!
ಕೈಯಲಿ ಕಿಂದರಿ ಹಿಡಿದಾ ಜೋಗಿ!
ಕುದುರೆಯ ಗೊರಸಿನ ಅಡಿಗಳ ಜೋಗಿ!
ಕಡವೆಯ ಕೊಂಬಿನ ತಲೆಯಾ ಜೋಗಿ!
ಆನೆಯ ಕಿವಿಗಳ ಕಿಂದರಿ ಜೋಗಿ!
ಹಂದಿಯ ದಾಡೆಯ ಕೋರೆಯ ಜೋಗಿ!
ಮಂಗನ ಮೂತಿಯ ಮುಂಡಿದಿಹ ಜೋಗಿ!
ಬಂದನು ಬಂದನು ಕಿಂದರಿ ಜೋಗಿ!
ಹಾರುತ, ತೇಲುತಲಿಳಿದನು ಜೋಗಿ!
ಕೈ ಕೈ ಮುಗಿಯುತ ಕಣ್ದೆರೆದು
ಹಿಂದಕೆ ಸರಿಯುತ ಜನರೆಲ್ಲಾ,

ದಾರಿಯ ಬಿಟ್ಟರು ಕಿಂದರಿ ಜೋಗಿಗೆ!
ಜೋಗಿಯು ಹತ್ತಿದ ಗೌಡನ ಕಟ್ಟೆಯ;
ಗೌಡನ ಹೃದಯವು ಬಾಯ್ಗೇ ಬಂದಿತು,
ಗಡಗಡ ನಡುಗಿದನು!
ತೊದಳುತ, ಬೆದರುತ, ಕಂಪಿತಕಂಠದಿ
ನೀನಾರೆಂದನು ಜೋಗಿಯ ಕುರಿತು.
ಅದಕಾ ಜೋಗಿಯು ಇಂತೆಂದ;
ಕೇಳಿದರೆಲ್ಲರು ಬಾಯ್ಬಿಟ್ಟು:
'ಹಿಮಗಿರಿಯಲ್ಲಿಹ ಜೋಗಿಯು ನಾನು;
ಪರಮೇಶ್ವರನಿಗೆ ಗೆಳೆಯನು ನಾನು;
ನಿಮ್ಮಾ ಗೋಳನು ಕೇಳಿದ ಶಿವನು
ನನ್ನನ್ನಿಲ್ಲಿಗೆ ಕಳುಹಿದನು.
ಇಲಿಗಳನೆಲ್ಲಾ ಕೊಂದರೆ ಆರು
ಸಾವಿರ ನಾಣ್ಯಗಳೀಯುವೆಯಷ್ಟೆ?'
ಉಬ್ಬಿತು! ಉಕ್ಕಿತು ಗೌಡನ ಸಂತಸ!
ಶಹಭಾಸೆಂದರು ಜನರೆಲ್ಲ.
ಗೌಡನು ಜೋಗಿಯ ಕುರಿತಿಂತೆಂದ;
ಜನರದನೆಲ್ಲಾ ಕೇಳಿದರು:
'ಬೇಕಾದುದ ನಾ ಕೊಡುವೆನು ಜೋಗಿ;
ಆರೇಕಿನ್ನೆರಡಾದರು ಕೊಡುವೆನು.
ಬೇಕಾದುದನೆಲ್ಲವ ನೀ ಕೇಳು;
ಊರೇ ನಿನ್ನದು! ನಾ ನಿನ್ನಾಳು!
ಆದರೆ ಒಂದೇ ಸಂದೇಹ—
ಇಲಿಗಳನೋಡಿಪ ಶಕ್ತಿಯು ನಿನಗೆ
ನಿಜವಾಗಿರುವುದು ಹೌದಷ್ಟೆ?'
ಜೋಗಿಯು ಹಿಂತಿರುಗೆಲ್ಲರ ನೋಡಿ,
ಕೈಯಾ ಕಿಂದರಿಯನು ಸರಿಮಾಡಿ,

ಗಡ್ಡವ ನೀವುತ ದುರದುರು ನೋಡಿ,
ಗೌಡನ ಕಡೆ ತಿರುಗಿಂತೆಂದ:
'ಕೃತಯುಗದೊಳು ಕೈಲಾಸದೊಳು
ಇಲಿಗಳ ಕಾಟವು ಮಿತಿಮೀರೆ,
ಇಲಿಗಳ ಕೊಲ್ಲುವೆನೆಂಬಾ ರೋಷ
ಏರಲು, ಭೈರವನಾದನು ಈಶ!
ಆದರು ಆಗದೆ ಮೂಷಿಕನಾಶ
ನಂದಿಯು ಕಳುಹಿದನೆನ್ನೆಡೆಗೆ:
ಕೊಂದೆನು ಅವುಗಳ ನಾ ಕಡೆಗೆ!
ಕಾಮನ ದಹಿಸಿದ ಹಣೆಗಣ್ಣು
ಮೂಷಿಕರೋಮವ ಸುಡಲಿಲ್ಲ!
ಬೊಮ್ಮನಹಳ್ಳಿಯ ಜನರೇ ಕೇಳಿ,
ಮುಂದಿನ ಕಥೆಯನು ಮುಗಿಸುವೆ ಹೇಳಿ:
ದ್ವಾಪರ ಯುಗದೊಳು ವೈಕುಂಠದೊಳು
ಮೂಷಿಕ ಸೈನ್ಯಕು ಜಯವಿಜಯರಿಗೂ
ಘೋರಕಾಳಗ ಜರುಗಿತು, ಕಡೆಗೆ
ಆ ಜಯವಿಜಯರು ವಿಷ್ಣುವಿನೆಡೆಗೆ
ಓಡುತ ಹೋದರು ಮೊರೆಯಿಡಲು,
ಮೂಷಿಕ ಸೈನ್ಯಕೆ ಮೈಸೋತು!
ಕಡೆಗಾ ವಿಷ್ಣುವೆ ಚಕ್ರವ ಹಿಡಿದು
ಮೂಷಿಕಬಳಗವ ಕೊಲ್ಲುವೆನೆಂದು
ಕದನವನಾಡಲು ಇಲಿಗಳ ಕೂಡೆ
ಮೂರ್ಛೆಗೆ ಸಂದನು ಬಲುಬಳಲಿ!
ವಿಷ್ಣುವೆ ಸೋತನು ಕದನದಲಿ!
ಪೀತಾಂಬರವನು ಹರಿದುವು ಕೆಲವು;
ಚಕ್ರದ ಹಲ್ಲನು ಮುರಿದುವು ಕೆಲವು!
ಕೌಸ್ತುಭರತ್ನವನಪಹರಿಸಿದುವು!
ಶಂಖವ ಭೂಂ ಭೂಂ ಊದಿದುವು!

ಗದೆಯುನ್ನೆಳೆದು ಬಿಸಾಡಿದುವು!
ರಾಕ್ಷಸಕೋಟಿಯ ಕೊಂದಾ ಚಕ್ರವು
ಬರಿದಾಯಿತು ಇಲಿಗಳ ಮುಂದೆ;
ಕಡೆಗೆನ್ನನು ಕರೆಕಳುಹಿದನು:
ಮೂಷಿಕನಾಶವ ಮಾಡಿದೆನು!'
'ಕಿಂದರಿ ಜೋಗಿಯೆ ನಿಲ್ಲಿಸು, ಸಾಕು;
ನೀ ಗಟ್ಟಿಗನೆಂಬುದು ಗೊತ್ತಾಯ್ತು!
ನಿನ್ನ ಪರಾಕ್ರಮಕಂತ್ಯವೆ ಇಲ್ಲ;
ಗೆಳೆಯರು ವಿಷ್ಣು ಮಹೇಶ್ವರರೆಲ್ಲ.
ನಮ್ಮೂರಿಲಿಗಳ ಸಂಹರಿಸು;
ಬೇಕಾದುದ ನಾವೀಯುವೆವು!'—
ಎಂದನು ಗೌಡನು ಸಂತಸದಿಂದ;
ಜನತತಿಗಾದುದು ಅತ್ಯಾನಂದ!

ಮರುಮಾತಾಡದೆ ಕಿಂದರಿ ಜೋಗಿ
ಕಟ್ಟೆಯನಿಳಿದನು ಬೀದಿಗೆ ಹೋಗಿ;
ಗಡ್ಡವ ನೀವುತ ಸುತ್ತಲು ನೋಡಿ,
ಮಂತ್ರವ ಬಾಯಲಿ ಮಣಮಣ ಹಾಡಿ,
ಕಿಂದರಿ ಬಾರಿಸತೊಡಗಿದನು,
ಜಗವನೆ ಮೋಹಿಸಿತಾ ನಾದ!
ಏನಿದು? ಏನಿದು? ಗಜಿಬಿಜಿ ಎಲ್ಲಿ?
ಊರನೆ ಮುಳುಗಿಪ ನಾದವಿದೆಲ್ಲಿ?
ಇಲಿಗಳು! ಇಲಿಗಳು! ಇಲಿಗಳ ಹಿಂಡು!
ಬಳಬಳ ಬಂದುವು ಇಲಿಗಳ ದಂಡು!
ಅನ್ನದ ಮಡಕೆಯನಗಲಿದುವು!
ಟೋಪಿಯ ಗೂಡನು ತ್ಯಜಿಸಿದುವು!
ಬಂದುವು ಅಂಗಿಯ ಜೇಬನು ಬಿಟ್ಟು,
ಮಕ್ಕಳ ಕಾಲಿನ ಚೀಲವ ಬಿಟ್ಟು.

## ಕಿಂದರಿ ಜೋಗಿ

ಹಾರುತ ಬಂದುವು, ಓಡುತ ಬಂದುವು,
ನೆಗೆಯುತ ಬಂದುವು, ಕುಣಿಯುತ ಬಂದುವು,
ಜೋಗಿಯು ಬಾರಿಸೆ ಕಿಂದರಿಯ!
ಸಣ್ಣಿಲಿ, ದೊಡ್ಡಿಲಿ, ಮೂಗಿಲಿ, ಸುಂಡಿಲಿ,
ಅಣ್ಣಿಲಿ, ತಮ್ಮಿಲಿ, ಅಮ್ಮಿಲಿ, ಅಪ್ಪಿಲಿ,
ಮಾವಿಲಿ, ಭಾವಿಲಿ, ಅಕ್ಕಿಲಿ, ತಂಗಿಲಿ,
ಗಂಡಿಲಿ, ಹೆಣ್ಣಿಲಿ, ಮುದುಕಿಲಿ, ಹುಡುಗಿಲಿ,
ಎಲ್ಲಾ ಬಂದುವು ಓಡೋಡಿ,
ಜೋಗಿಯು ಬಾರಿಸೆ ಕಿಂದರಿಯ!

ಬಂದುವು ನಾನಾಬಣ್ಣದ ಇಲಿಗಳು,
ಕೆಂಪಿನ ಇಲಿಗಳು, ಹಳದಿಯ ಇಲಿಗಳು,
ಬೆಳ್ಳಿಲಿ, ಕರಿಯಿಲಿ, ಗಿರಿಯಿಲಿ, ಹೊಲದಿಲಿ,
ಕುಂಕುಮರಾಗದ, ಚಂದನರಾಗದ,
ಹಸುರಿನ ಬಣ್ಣದ, ಪಚ್ಚೆಯ ವರ್ಣದ,
ಸಂಜೆಯ ರಾಗದ, ಗಗನದ ರಾಗದ,
ನಾನಾವರ್ಣದ ಇಲಿಗಳು ಬಂದುವು,
ಕುಣಿಯುತ ನಲಿಯುತ ಸಂತಸದಿ,
ಜೋಗಿಯು ಬಾರಿಸೆ ಕಿಂದರಿಯ!

ನೋಡಿರಿ! ಕಾಣಿರಿ! ಬರುತಿಹವಿನ್ನೂ!
ಅಟ್ಟದ ಮೇಲಿಂ ಬರುವುವು ಕೆಲವು!
ಕಣಜದ ಕಡೆಯಿಂ ಬರುವುವು ಕೆಲವು!
ಓಹೋ! ಬಂದುವು ಹಿಂಡ್ಹಿಂಡಾಗಿ!
ಕುಂಟಿಲಿ, ಕಿವುಡಿಲಿ, ಹೆಳವಿಲಿ, ಮೂಗಿಲಿ,
ಚೀ! ಪೀ! ಎನ್ನುತ ಕೂಗುತಲೋಡಿ
ಗಹಗಹಿಸುತ ನೆರೆ ನಲಿನಲಿದಾಡಿ
ಬಂದಿತು ಮೂಷಿಕಸಂಕುಲವು
ಜೋಗಿಯು ಬಾರಿಸೆ ಕಿಂದರಿಯ!

ಬೊಮ್ಮನಹಳ್ಳಿಯ ಕಿಂದರಿ ಜೋಗಿ
ಹೊರಟನು ತುಂಗಾನದಿಯೆಡೆಗಾಗಿ.
ಕಿಂದರಿ ನಾದವು ಗಗನಕ್ಕೇರಿತು
ಇಲಿಗಳನೆಲ್ಲಾ ಮನಮೋಹಿಸಿತು!
ಕಿಂದರಿ ಜೋಗಿಯ ಹಿಂಬಾಲಿಸಿದರು
ಜನಗಳು ನೋಡಲು ಕೌತುಕವ,
ಜೋಗಿಯು ನಡೆದನು, ಇಲಿಗಳು ನಡೆದುವು,
ಸೇರಿದರೆಲ್ಲರು ನದಿಯೆಡೆಯ;
ಹೊಳೆಯಾ ಮರಳಿನ ಗುಡ್ಡೆಯ ತುಂಬಾ
ನೋಡಿದರಲ್ಲಿಯು ಮೂಷಿಕಗುಂಪೇ!
ಉಸಿರಾಡದೆ ನಿಂತರು ಜನರೆಲ್ಲಾ
ಮುಂದೇನಾಗುವುದೆಂದಲ್ಲಿ!
ದಿವಿಜರು ಕವಿದರು ಗಗನದಲಿ,
ಹೂಮಳೆ ಕರೆದರು ಹರುಷದಲಿ;
ದುಂದುಭಿನಾದವ ಮಾಡಿದರು,
ಕಾಣದ ಬೆರಗನು ನೋಡಿದರು!
ಸುತ್ತಲು ನೋಡಿದ ಕಿಂದರಿ ಜೋಗಿ,
ನಡೆದನು ಹೊಳೆಯಾ ನೀರಿನ ಮೇಲೆ!
ಸೇರಿದ ಜನರೆಲ್ಲರು ಬೆರಗಾಗಿ,
'ಜಯ ಜಯ ಜೋಗೀ!' ಎಂದರು ಕೂಗಿ!
ಇಲಿಗಳು ಒಂದರ ಮೇಲೊಂದು
ಹಿಂಬಾಲಿಸಿದುವು ಜೋಗಿಯನು;
ಬುಳುಬುಳು ನೀರೊಳು ಮುಳುಗಿದುವೆಲ್ಲಾ
ಹೆಣವಾಗಲ್ಲಿಯೆ ತೇಲಿದುವು.
ಎಲ್ಲಾ ಮುಳುಗಿದುವೆಂದೆನೆ, ಅಲ್ಲಾ!
ರಾವಣನಂದದ ಮೂಷಿಕವೊಂದು
ದೃಢವಾಗೀಜುತ ಸೇರಿತು ದಡವ!

ಆಗದು ಜನರಿಗೆ ಈ ಪರಿ ನುಡಿಯಿತು
ಕಿಂದರಿ ನಾದದ ಅನುಭವವ:
'ಕಿಂದರಿ ಬಾರಿಸಿದಾಗಲೆ ಎಲ್ಲಿಯು
ಹೋಳಿಗೆವಾಸನೆ ತುಂಬಿದುದು;
ಯಾರೋ ಹೋಳಿಗೆ ಮಾಡುವರೆಂದು
ಗೂಡನು ಬಿಟ್ಟೆವು ಹೊರಗಡೆ ಬಂದು.
ನೋಡಲು ಹಲ್ವದ ರಾಶಿಯು ಕಂಡೆವು;
ವಿಧವಿಧ ತಿಂಡಿಗಳೆಲ್ಲಾ ಜೋಗಿಯು
ಸುತ್ತಲು ಮೆರೆವುದ ನೋಡಿದೆವು!
ಬಲಗಡೆ ದೊಡ್ಡ ಮಿಠಾಯಿಯ ರಾಶಿ,
ಎಡಗಡೆ ಬೆಣ್ಣೆಯ ಮುದ್ದೆಯ ರಾಶಿ,
ತಲೆಯೊಳು ಸಕ್ಕರೆ, ಕೈಯೊಳು ಬೆಲ್ಲ;
ಬನ್ನಿರಿ, ಬನ್ನಿರಿ, ಎಂದುವು ಎಲ್ಲ!
ಹಿಂಬಾಲಿಸಿದೆವು ನಾವುಗಳು
ತಿಂಡಿಯ ತಿನ್ನುವ ಛಲದಿಂದ,
ಕಡೆಗೆಲ್ಲವು ಬರಿಬಯಲಾಯ್ತು,
ತಿಂಡಿಯೆ ಹರಿಯುವ ಹೊಳೆಯಾಯ್ತು.
ಜನರೆಲ್ಲರು ಮಾಯೆಗೆ ಬೆರಗಾಗಿ
'ಜಯಜಯ ಜೋಗೀ!' ಎಂದರು ಕೂಗಿ!
ಬಿಳಿದಾಯಿತು ಗೌಡನ ಮುಖಮಾತ್ರ
ಹಣಕೊಡಬೇಕಾಯ್ತಲ್ಲಾ ಎಂದು!

ಕಿಂದರಿ ಜೋಗಿಯು ಹಿಂದಕೆ ಬಂದ,
'ಗೌಡನೆ, ನಾಣ್ಯಗಳನು ಕೊಡು' ಎಂದ!
ಗೌಡನು ನೋಡಿದ ಬೆರಗಾಗಿ:
'ಸಾವಿರ ಆರೂ' ಎಂದನು ಜೋಗಿ!
ಗೌಡನು ನಿಂತನು ತಲೆದೂಗಿ!
'ಕಿಂದರಿ ಜೋಗಿಯೆ, ಹೇಳುವೆ ಕೇಳು,

ಸಾವಿರ ವರಹ ನಾ ಕೊಡಲಾರೆನು;
ನೀ ಮಾಡಿದ ಕೆಲಸವು ಹೆಚ್ಚಲ್ಲ,
ಸುಮ್ಮನೆ ಕಿಂದರಿ ಬಾರಿಸಿದೆ.
ಇಲಿಗಳ ಹೊತ್ತೆಯು ನೀನೇನು?
ಅವುಗಳು ತಮ್ಮಷ್ಟಕೆ ತಾವೇ
ಬಿದ್ದುವು, ಹೊಳೆಯಲಿ ಮುಳುಗಿದುವು!
ಕೊಡುವೆನು ನೀ ಪಟ್ಟಿಹ ಶ್ರಮಕಾಗಿ
ಕಾಸ್ಯೆದಾರನು ತೆಗೆದುಕೊ ಜೋಗಿ,
ಪುರಿಗಡಲೆಯ ಕೊಂಡುಕೊ ಹೋಗಿ!'

ಈ ಪರಿ ನುಡಿಯಲು ಗೌಡನು, ಜೋಗಿಯು
ಕಂಗಳ ಕೆರಳಿಸುತಿಂತೆಂದ:
'ಆಡಿದ ಭಾಷೆಯ ತಪ್ಪುವೆಯ?
ಸಾವಿರ ವರಹ ಕೊಡದಿರೆ ನೀನು
ಮತ್ತೀ ಕಿಂದರಿ ಬಾರಿಸುವೆ!
ನಿಮ್ಮಾ ಹಳ್ಳಿಯನಾರಿಸುವೆ!'
'ಸಾವಿರವಾರನು ಕೊಡುವರದಾರು?
ಅಪ್ಪನ ಗಂಟೇ? ಹೋಗೋ, ಜೋಗಿ!
ನೀ ಮಾಡುವುದೇನನು ನೋಡುವೆನು;
ಮಾತಾಡದೆ ತೊಲಗಿಲ್ಲಿಂದ!
ಹೆಚ್ಚಿಗೆ ಮಾತೇನಾದರು ನುಡಿದರೆ
ಕಿಂದರಿಯೊಡಿಸುವೆ, ಗಡ್ಡವ ಸುಡಿಸುವೆ,
ನಿನ್ನೀ ತಲೆಯನು ಬೋಳಿಸುವೆ;
ಕಿಂದರಿತಂತಿಯು ಹರಿಯುವವರೆಗೂ
ಬಾರಿಸು ಬೇಡೆಂದವರಾರು?
ಬಲ್ಲೆಯ ನಾನಾರೆಂಬುದನು?
ಊರ ಪಟೇಲನು, ಹಳ್ಳಿಗೆ ಗೌಡ!
ನಡೆ, ನಡೆ, ಮರುಮಾತಾಡದಿರು!'

ಗೌಡನ ನುಡಿಯನು ಕೇಳಿದ ಜೋಗಿಯು
ಕಿಂದರಿ ಬಾರಿಸ ತೊಡಗಿದನು.
ನಾದವು ಹಬ್ಬಿತು ಊರೊಳಗೆಲ್ಲಾ,
ಕರೆಯಿತು ಊರಿನ ಹುಡುಗರನೆಲ್ಲಾ!
ಓಡುತ ಬಂದರು ಬಾಲಕರು
ಕೇಳದೆ ಹಿರಿಯರ ಮಾತುಗಳ;
ಬೊಮ್ಮನಹಳ್ಳಿಯ ಕಿಂದರಿ ಜೋಗಿ
ಕಿಂದರಿ ಬಾರಿಸಿದನು ಇಂಪಾಗಿ!
'ಟಿಂಗಾ! ಟಿಂಗಾ! ಟಿಂಗಾ! ಟಿಂಗ್!' ನಾದವ ಕೇಳಿ
ಚಂಗಾ! ಚಂಗ್! ನೆಗೆದರು ಬಾಲಕರು.
ಕಿಂದರಿ ಜೋಗಿಯು ಹೊರಟನು ಮುಂದೆ
ಬಾಲಕರೆಲ್ಲರು ನಡೆದರು ಹಿಂದೆ!
ಊರಿನ ಜನರೆಲ್ಲರು ಭಯದಿಂದ
ಎಂದರು 'ಮಕ್ಕಳ ಗೌಡನೆ ಕೊಂದ;
ಹಾಳಾದೆವು ಗೌಡನ ದೆಸೆಯಿಂದ.'
ಗೌಡನು ಕೂಗಿದ ಹೆದರಿಕೆಯಿಂದ,
ಜೋಗೀ! ಜೋಗೀ! ಹಿಂತಿರುಗೆಂದ.
ಕಿಂದರಿ ಜೋಗಿಯು ನಡೆದನು ಮುಂದೆ,
ಬಾಲರು ಓಡುತ ಹೋದರು ಹಿಂದೆ.
ಕುಂಟರು ಭರದಿಂದೋಡಿದರು!
ಕುರುಡರು ನೋಟವ ನೋಡಿದರು!
ಮೂಗರು ಸವಿಮಾತಾಡಿದರು!
ಕಿವುಡರು ನಾದವ ಕೇಳಿದರು!
ಬಾಲರು ಭರದಿಂದೋಡಿದರು!
ಜನರೆಲ್ಲಾ ಗೋಳಾಡಿದರು!
ಬೊಮ್ಮನಹಳ್ಳಿಯ ಕಿಂದರಿ ಜೋಗಿ
ಮಕ್ಕಳ ಹೊಳೆಯೊಳಗಿಳಿಸುವನೆಂದು,
ಓಡಿದರೆಲ್ಲರು ಜೋಗಿಯ ಹಿಂದೆ.

ಹೊಳೆಯಾ ತೀರವ ಜೋಗಿಯು ಸೇರಿ,
ನೀರೊಳಗಿಳಿಯದೆ ಬಲಗಡೆ ತಿರುಗಿ
ಚೌಡಿಯ ಬೆಟ್ಟಕ್ಕಭಿಮುಖವಾದ,
ಭರದಿಂ ಬೇಗನೆ ಮುಂದಕೆ ಹೋದ.
ಬೆಟ್ಟವನವನೇರುವುದಿಲ್ಲೆಂದು
ಹಾರೈಸಿದರಾ ಊರಿನ ಜನರು.
ಬೆಟ್ಟದ ಬುಡವನು ಸೇರಿದ ಜೋಗಿ;
ನಿಲ್ಲುವನೆಂದೆಲ್ಲಾ ಬಯಸಿದರು!

ಏನಿದು ನಿಂತರು ಜನರೆಲ್ಲ?
'ಅಯ್ಯೋ ಮಕ್ಕಳ!' ಎಂದೆನುತ.
ಜೋಗಿಯು ಬಾರಿಸೆ ಕಿಂದರಿಯು
ಬಾಗಿಲ ತೆರೆಯಿತು ಆ ಗಿರಿಯು!
ಜೋಗಿಯು ನುಗ್ಗಿದನದರಲ್ಲಿ
ಹಿಂದೆಯೆ ಹೋದರು ಬಾಲಕರು!

ಬೆಟ್ಟವು ಬಾಗಿಲ ಹಾಕಿತು ಬೇಗ;
ಹಿಂದಕ್ಕುಳಿದವನೊಬ್ಬನೆ ಕುಂಟ.

ಅಲ್ಲಿಗೆ ಬಂದರು ಜನರೋಡಿ,
ಕುಂಟನ ಕಂಡರು ಒಂಟಿಯಲಿ;
ಕುಂಟನನುಳಿದವರೆಲ್ಲೆಂದು
ಕೇಳಲು ಬೆಟ್ಟವ ತೋರಿದನು.

ಕಂಬನಿಗರೆದರು ಗೋಳಾಡಿದರು,
ಜೋಗಿಯ ಕೂಗುತ ಒಲು ಬೇಡಿದರು.

ಬೆಟ್ಟವು ಕೊಟ್ಟಿತು ಮರುದನಿಯ,
ಭೂಮಿಯು ಹೀರಿತು ಕಂಬನಿಯ.

ಉಳಿದಾ ಕುಂಟನು ಅಳುತಿಂತೆಂದ:
'ಅಯ್ಯೋ ಎನಗಿಲ್ಲವರಾನಂದ!
ಜೋಗಿಯು ಕಿಂದರಿ ಬಾರಿಸೆ ಕಂಡೆವು

ಬಣ್ಣದ ಮನೆಗಳ ಪಟ್ಟಣವ,
ಹಣ್ಣುಗಳುದುರಿದ ತೋಟಗಳ ;
ನಾನಾ ಆಟದ ಸಾಮಾನುಗಳ,
ತರತರ ರಾಗದ ಗೊಂಬೆಗಳ ;
ಮಾತಿಗೆ ಏರಿದ ಆನಂದಗಳ,
ಕೈಗೇ ಸಿಕ್ಕುವ ಹಕ್ಕಿಗಳ!
ಜಿಂಕೆಗಳೆಮ್ಮೊಡನಾಡಿದುವಲ್ಲಿ,
ಮೊಲಗಳು ಕುಳಿತವು ಮೈಮೇಲಲ್ಲಿ!
ಅಯ್ಯೋ ಹೋಯಿತೆ ಆ ನಾಕ!
ಅಯ್ಯೋ ಬಂದಿತೆ ಈ ಲೋಕ!'

ಬಂದರು ಎಲ್ಲರು ಬೊಮ್ಮನಹಳ್ಳಿಗೆ
ದುಃಖಾಂಬುಧಿಯೊಳಗೀಜಾಡಿ ;
ಕಂಬನಿಗರೆದರು ಗೋಳಾಡಿ!
ಈಗಾ ಹಳ್ಳಿಯ ಬೀದಿಯಲಾರೂ
ಕಿಂದರಿನಾದವನಾಲಿಸರು ;
ಕಿಂದರಿ ಜೋಗಿಗಳಲ್ಲಿಗೆ ಬಂದರೆ
ಬೇಕಾದ್ದೆಲ್ಲವನೀಯುವರು !
ಭಾಷೆಯ ಕೊಟ್ಟರೆ, ಮೂರ್ತೀ, ನಾವು
ಮೋಸವ ಮಾಡದೆ ಸಲ್ಲಿಸಬೇಕು.
ಆದುದರಿಂದ, ಮೂರ್ತೀ, ಕೇಳು
ಸತ್ಯವನೆಂದೂ ತ್ಯಜಿಸದೆ ಬಾಳು !

---

# ಕುಮುದಿನಿ*

ಮೋಡಗಳ ಸುಳಿವಿಲ್ಲ. ಬಾನೊಳು
ಮಿಂಚಿದುವು ಚುಕ್ಕಿಗಳು. ತಳಿರೆಡೆ
ಚರಿಸಿ ಕಂಪನು ಸೂರೆಗೊಳ್ಳುತ
ಲೀಲೆಯೊಳು ಮೈಮರೆತ ತಣ್ಣೆಲ-
ರೊಯ್ಯನೊಯ್ಯನೆ ತೀಡಿತು.
ತಾಯಿಯೆದೆಯನ್ನಪ್ಪಿ ನಲಿಯುವ
ಹಾಲುಹಸುಳೆಯ ತೆರದಿ ಬನಗಳ
ಮೇಲೆಯೊರಗಿತು ಚೆಲುವಿನೊರತೆಯ
ತಿಂಗಳಿನ ಹೊಂಬೆಳಕು. ಹಬ್ಬಿತು
ಮೌನ ನಾಡಿನಲಿ!
ಹರಿಯುತಿಹ ತೊರೆಯ ಬಳಿ ಮೆರೆಯಿತು
ಬನದ ಮುತ್ತನ್ನೊಲಿದು ನಲಿಸುತ
ಕಣ್ಣ ಸೆಳೆಯುವ ಹುಲ್ಲುಗುಡಿಸಲು
ಜೊನ್ನದಲಿ ಮಿಂದು.
ಅಂಗಳದ ಮಲ್ಲಿಗೆಯ ಬಳ್ಳಿಯು
ಚೆಲ್ಲುತಿಹ ಬಿರಿಮುಗುಳನಾಯದೆ,
ಉಪವನದ ಗಿಡ ಬಳ್ಳಿ ಮೆರೆಯುವ
ಸುಗ್ಗಿ ತಿಂಗಳಿನಲರ ಕೊಯ್ಯದೆ,
ಗುಡಿಸಲೆಸೆದುದು ಕಂಗಳಿಗೆ ತಾಂ
ಬಿಟ್ಟ ಮನೆಯಂತೆ!

ಆದರೇನಾ ಮನೆಯ ಜಗುಲಿಯ
ಮೇಲೆ ಬೆಳಗುವ ಸೊಡರಿನೆಡೆಯಲಿ
ಕಾಂಚನದ ಕಮನೀಯತನವನು

* ವರ್ಡ್ಸ್‌ವರ್ತ್ ಕವಿಯ 'Laodamia' ಎಂಬ ಕವಿತೆಯ ಭಾವವನ್ನು ಗ್ರಹಿಸಿ ರಚಿತವಾದದ್ದು.

ಕಣ್ಣ ಮಿಂಚೊಳು ಜರೆಯುತಿರುಳಿನ
ಕತ್ತಲಸು ಮುಡಿಯಲ್ಲಿ ಮುಡಿಯುತ,
ಮೊಗದ ಬಾಡಿದ ಕಳೆಯೊಳಿಂದುಗೆ
ನಾಚಿಕೆಯ ನೀಡುತ್ತ ಕುಳಿತಿಹ-
ಳೊರ್ವ ಭಾಮಿನಿಯು!

ಮೊಗದ ಕೊಳದೊಳಗರಳಿದಬುಜಗ-
ಳಂತೆ ರಂಜಿಪ ಕಂಗಳಿಂ ಬಹ
ಬಿಸಿಯ ಮಧುಧಾರೆಯೊಲು ಕಂಬನಿ
ಹರಿದುವಂಗೈಲಿಟ್ಟ ಕೆನ್ನೆಯ
ಮೇಲೆ ಎಡೆಬಿಡದೆ;

ಆಳಲಿನಗ್ಗಿಯಲುರುಳಿ ಬೆಂದಿಹ
ನಳಿನದಂದದೊಳಿದ್ದಳಾ ನಳಿ-
ನಾಕ್ಷಿ ಕಂಗಳಿಗೆ!

ಎದೆಯೊಳುರಿವಾ ನೋವದಾವುದು?
ಕಣ್ಣೊಳಿಳಿವಾ ಬೆಸನವಾವುದು?
ಬಿಸಿಯ ಸುಯ್ಲಲಿ ಬಸಿವ ದುಃಖವ-
ದಾವುದೆಲೆ ರಮಣಿ?

ಒಲಿದವರ ಅಗಲಿಕೆಯೊ? ಫಲಿತಿಹ
ಯೌವನದ ಬೇವುರಿಯೋ? ಪಡೆದಿಹ-
ರಳಿದಿರುವ ಯಾತನೆಯೊ? ಬಯಕೆಯು
ನಲ್ಲದುರಿಯೋ? ಮೇಣ್ ನಿರಾಶೆಯ
ಬೆಂಕಿಯೋ? ಪೇಳೇನು, ಕುಮುದಿನಿ,
ಎದೆಯ ಕೊರೆಯುವ ಗೋಳನು!

ವರುಷವೆರಡರ ಹಿಂದೆ ರಮಣನು
ಕದನಕ್ಕೈದಿದ; ಮರಳಲಿಲ್ಲವು.
ದಿನಗಳಳಿದುವು, ಪಕ್ಷಕಳೆದುವು,

ಮಾಸಗಳು ಬಿರಬಿರನೆ ಸುಳಿದುವು,
ದುಗುಡ ಹೆಚ್ಚಿತು ಬಯಕೆಯ!
ಇನಿಯನಾಗಮನವನು ಹಾರೈ-
ಸುತ್ತ ತರಳೆಯು ಕಂಬನಿಗಳಂ-
ಜಲಿಯ ಜಗದೀಶನಿಗೆ ಅರ್ಪಿಸಿ,
ಎದೆಯ ಭಕುತಿಯ ಮೇಲೆ ಭಾರವ-
ನಿಟ್ಟು ಕಾಲವ ನೂಂಕುತಿರುವಳು
ರಮಣದರ್ಶನಕೆ!

ಮಾನವಗೆ ನಂಬುಗೆಯ ಬಲವೇ
ಪರಮ ಬಲವೈ! ಜೀವಮಾನದ
ಕಷ್ಟಗಳ ಕರಗಿಪುದು ಭಕ್ತಿಯು.
ಬಾಳಿಗೀಯುತ ಬೆಳಕ ಪೊರೆವುದು
ಶಕ್ತಿಯನು ನೀಡಿ!
ಬಾಳಿನೊರತೆಯ ಬತ್ತಿಸದು; ತಿಳಿ-
ವಳಿಕೆಗೀವುದು ರಾಗದಿಂಪನು;
ಎದೆಯ ಮರುಭೂಮಿಯನು ಮಾಡದು;
ಮನದ ಒಣ ವಿಜ್ಞಾನಕೀವುದು
ರಸದ ಪೆಂಪನು. ದಾರಿಯನು ಮರೆ
ಮಾಡದೆಂದಿಗು ಭಕ್ತಿಯು!
ಬೆಟ್ಟಗಳನೆತ್ತುವುದು; ಮಿರುತ್ತುವ
ಮುರಿಯುವುದು; ಹರಿಯುವುದು ಮಾಯಾ
ಜಾಲವನು; ಕಾಣದಿಹ ದೇವನ
ತೋರುವುದು ಕಂಗಳಿಗೆ; ಜನರಿಗೆ
ಜೀವನವನೊಲಿಸುವುದು; ಸಾವಿನ
ಭಯವ ಪರಿಹರಿಸಿತ್ತು ಮುಕುತಿಯ
ಸಲಹುವುದು ಭಕುತಿ!

ಗೂಬೆ ಕೂಗಿದರೇನು ಮರದಲಿ?
ಹಾಲ ಚೆಲ್ಲಿದರೇನು ತಿಂಗಳು?
ತಾರೆ ಮಿನುಗಿದರೇನು ನಭದಲಿ?
ಸೊಬಗು ಹೊರಗಡೆ ನಲಿದರೇನು?
ತರಳೆಯರಿಯುವಳೆ!
ಒಳಗೆ ತೋರದ ಸೊಗವು ಬಯಲಲಿ
ಎನಿತು ಹರಡಿದರೇನು? ರಮಣಿಯ
ಮನವ ಸೆಳೆಯುವುದೆ?
ತನುವು ಗುಡಿಸಲೊಳಿದ್ದರೇನಾ
ಮನವು ಪತಿಯಿಹ ಲೋಕದಲಿ ಸಂ-
ಚರಿಸೆ ಸೋಜಿಗವೆ?
ಇನಿಯನಿಹನೋ? ಕದನದಲಿ ಮಡಿ-
ದಿಹನೊ? ಕೈದುಗಳಾಟದಲಿ ನೊಂ-
ದಿಹನೊ? ಅರಿಗಳ ಸೆರೆಮನೆಯಲುರು-
ಳುವನೊ? ದೇಸಿಗನಂತೆ ಚರಿಪನೊ?
ಎಂಬ ಹಂಬಲದಲ್ಲಿ ಬೆಂದಳು
ಸಂದೆಯದಿ ನೊಂದು!

"ಬೆಳಗುತಿಹ ಚಂದಿರನೆ, ಮಿರುಗುವ
ತಾರೆಗಳೆ, ಬಿತ್ತರದ ಗಗನವೆ,
ಲೋಕವನು ದಿಟ್ಟಿಸುತ ಚರಿಸುವ
ನಿಮಗೆ ತೋರನೆ ಎನ್ನೊಲವಿನಸಂ-
ಬುಧಿಯ ಹಿಮಕರನೆಲ್ಲಿ ನೆಲೆಸಿಹ-
ನೆಂಬುದನು ತಿಳಿಸೆನಗೆ ಕರುಣಿಸಿ.
ನಮಿಸುವೆನು ನಿಮಗೆ!
ತಂಬೆಲರೆ ಸುದ್ದಿಯನು ತಿಳಿಸೈ
ರಮಣನೆಲ್ಲಿಹನೆಂದು, ಪೂರ್ವದೊ-

ಳೆಂದು ಸೀತಾದೇವಿಗರುಹನೆ
ನಿನ್ನ ಮಗ ಹನುಮಂತದೇವನು
ರಾಮನೆಲ್ಲಿಹನೆಂಬ ಮಂಗಳ-
ವಾದ ವಾರ್ತೆಯನು ?

ಇನಿಯನಗಲಿದ ರಮಣಿ ಜಾನಕಿ-
ಯಾದರೇನಂತಲ್ಲವಾದರೆ
ಏನು ? ಒಲುಮೆಯೊಳಿಹುದೆ ಭೇದವು ?
ವಿರಹಯಾತನೆಯೊಂದೆ ಅಲ್ಲದೆ
ಬೇರೆ ಬೇರಿಹುದೆ ?

ಬೇಡುವೆನು ದಿವಿಜರಿರ ನಮಿಸುತ.
ಗಾಳಿವಟ್ಟೆಯೊಳಲೆವ ನಿಮಗೀ
ಕಜ್ಜವಲ್ಲವು ಕಠಿನ. ಹೇಳಿರಿ
ರಮಣನೆಲ್ಲಿಹನೆಂದಿಗೈತಹ-
ನೆಂಬ ಸತ್ಯವನು !

ಬೇಡುವೆನು, ಜಗದೀಶ, ಬಾಲೆಯ
ಪಾಲಿಸೈ. ನಿನ್ನನ್ನೆ ನಂಬಿಹೆ-
ನಿನ್ನು ಬೇರೆಯ ಗತಿಯ ಕಾಣೆನು.
ಕಳುಹು ರಮಣನನು.

ಸರ್ವಶಕ್ತನು ನೀನು ; ನಿನಗಿದು
ದೇವ ಪೇಳ್ ಹುಲುಗಜ್ಜವಲ್ಲವೆ ?
ತೋರು ಇನಿಯನನು.''

ಬೇಡಿದಳು ಇಂತೆಂದು ಕುಮುದಿನಿ.
ಕೇಳಿದನು ಜಗದೀಶ. ದಿವಿಜರು
ಕೇಳಿದರು. ಕೇಳಿದರು ಮಾರುತ
ಗಗನವಿಂದುವು ತಾರೆಯಾವಳಿ
ಎಲ್ಲ ಕಿವಿಗೊಟ್ಟು !

ಎದೆಯು ಯಾತನೆಯಿಂದ ಸುಡಿಯುವ
ದನಿಯು ಮರುದನಿಯಾಗಿ ಮುಟ್ಟದೆ
ವಿಶ್ವದೆಲ್ಲೆಡೆಯು ?
ಹಿಂದೆ ಕೊಳದೊಳು ಮೊಸಳೆ ಹಿಡಿಯಲು
ಹಸ್ತಿರಾಜನು ಹರಿಗೆ ಮೊರೆಯಿಡೆ,
ಬಂದು ಚಕ್ರದಿ ಸೀಳಿ ನಕ್ರವ,
ಪೊರೆದನಾತನನು.
ಕರಿಯು ಮೊರೆಯಿಡೆ ಬಂದು ಕಾಯ್ದಾ
ಕರುಣಿ ಕಾಯನೆ ಕರೆಯೆ ಕಾಮಿನಿ
ಪರಮ ಭಕ್ತಿಯಲಿ?
ವಿಷ್ಣುದೂತರು ಬಂದು ಸಗ್ಗಕೆ
ಹರಿಯ ಸಂದೇಶವನು ನುಡಿದರು :
ಕುಮುದಿನಿಯ ರಮಣನನು ಕಳುಹಲು
ಮೂರು ಗಳಿಗೆಯ ಮಾತ್ರಕೆ !
ಕಾಳಗದಿ ಕೈಮಾಡಿ ಮಡಿದಾ
ಸತಿಯ ಪತಿ ರಣವೀರನೆಂಬುವ
ಭಟನ ಕರೆಯುತ ಬಳಿಗೆ ಸಗ್ಗದ
ರಾಜನಿಂತೆಂದ :
"ಹೋಗು ವೀರನೆ, ನಿನ್ನ ಸತಿಯೊಡ-
ನಿದ್ದು ಮೂರೇ ಗಳಿಗೆಯಲಿ ಸಂ-
ತೈಸಿಯಾಕೆಯ ಹಿಂತಿರುಗಿ ಬಾ
ಮರೆಯದಾಣತಿಯ !
ದೂತನೊಬ್ಬನ ಕಳುಹುವೆನು ನಿ-
ನ್ನೊಡನೆಯಾತನ ಮಾತ ಮೀರದೆ,
ಕಾಮಿನಿಯ ಕಾಮುಕ್ಕೆ ಸಿಲುಕದೆ,
ಸುರರ ಧರ್ಮವ ಮೀರಿ ನಡೆಯದೆ
ಹೋಗಿ ಬಾ ಬೇಗ !"

ಸುರಪತಿಗೆ ಕೈಮುಗಿದು ವೀರನು
ದೂತನೊಬ್ಬನ ಕೂಡಿ ಹೊರಟನು
ಸಗ್ಗದಿಂದಿಳೆಗೆ!

ಏನ ಕಂಡಳು ಕುಮುದಿನಿ?
ಬೆಚ್ಚುತಿಹಳೇಕಿಂತುಟು?
ಅರಳಿಯೆಲೆಯಲ್ಲಾಡದಿರುವುದು;
ಗಾಳಿ ಸುಳಿಯದು; ಜನವಿಹೀನವು;
ನಿನದವೇನಿದು ಬರುತಿದೆ?
ಅಂಗಳದ ಮಲ್ಲಿಗೆಯ ಬಳ್ಳಿಯು
ಮೊಗ್ಗುಗಳ ಬಳಬಳನೆ ಸೂಸಿತು;
ತಲೆಯನೊಲೆದುವು ಹೂವುಗಿಡಗಳು;
ತೆರೆಯದೆಯೆ ಬಾಗಿಲುಗಳೆಲ್ಲಾ
ತಮಗೆ ತಾವೇ ಸೆಡೆತು ತೆರೆದುವು
ಸುರರ ಬರವನು ಸೂಚಿಸಿ!
ನೋಡಿದಳು ತಲೆಯೆತ್ತಿ ತರಳೆಯು:
ನಡುಗಿದಳು ತನ್ನೆದುರಿನಲ್ಲಿಹ
ದೀಪದೆಡೆಯೊಳು ನೆಳಲ ತೋರದೆ
ನೆಲವ ಸೋಂಕದೆಯಂತರಾಳದಿ
ನಿಂತ ರೂಪುಗಳೆರಡ ಕಾಣುತ
ಬೆಚ್ಚಿ ಬೆರಗಾಗಿ!
ಹೊಳೆವ ಹೊನ್ನನು ಕಡೆದು ಜೊನ್ನದ
ಮಿರುಗನಿತ್ತಂದದಲಿ, ಬೆಂಕಿಯು
ಬೇಗೆಯನು ಕಳೆದುಳಿದ ಶಾಂತಿಯು
ರೂಪುವೆತ್ತಂದದಲಿ, ಬಾಲೆಯ
ಮುಂದೆ ಕಂಗಳಿಗೆಸೆದರಮರರು
ಅಮರತೇಜದಲಿ!

ಮೊಗದಿ ನಲಿಯಿತು ನಗೆಯ ತಿಂಗಳು.
ಕಂಗಳರಳಿದುವರಳುವಂದದಿ
ಸುಗ್ಗಿಯಲಿ ಮೊಗ್ಗುಗಳು; ಚಂಚಲ
ಜಲದೊಳೆಳಮೀನಲೆಯುವಂದದಿ
ಮಿಂಚಿದುವು, ಚಲಿಸಿದುವು. ಸಂತಸ-
ದಿಂದಲುಬ್ಬಿತು ಎದೆಯು. ಹಿಗ್ಗಿತು
ಕಾಮಿನಿಯು ದೇಹಲತೆಯಿನಿಯನ-
ನೆದುರಿನಲಿ ಕಂಡು!
ಮರೆತಳನಿಮಿಷದೂತನಿರವನು;
ವಿರಹದುದ್ರೇಕದಲಿ ಭೀತಿಯು
ತೊರೆದಳಿನಿಯನನಪ್ಪಲೋಸುಗ
ಮೊಗವ ಮುಂದಕೆ ಚಾಚಿ, ತೋಳ್ಗಳ
ನೀಡಿ ನೆಗೆದಳು! ಹಿಡಿಯಲಾರದೆ
ಸೂಕ್ಷ್ಮರೂಪವ ಕಂಪಿಸುತ ಬೆರ-
ಗಾದಳಾ ರಮಣಿ!
ಹಿಡಿದರೊಡೆಯಿತು ಕೈಗೆ ಸಿಲುಕದೆ;
ಮರಳಿ ಕೂಡಿತು ಹೊಳೆಯುವಾಕೃತಿ;
ಮುನ್ನಿನಂತೆಯೆ ನಲಿಯತೊಡಗಿತು
ಕಾಮಿನಿಯ ಮುಂದೆ!
ಕಾಮುಕರ ಕಂಗಳಿಗೆ ಕನಸಾ-
ದೊಡೆಯು ಸತ್ಯವು: ಮೇಘದೂತನ
ಮಾಡಿ ಕಳುಹನೆ ಯಕ್ಷನೊಬ್ಬನು
ತನ್ನ ಸತಿಯೆಡೆಗೆ?

ಸತಿಯು ಬೆದರುವಳೆಂದು ಬಗೆಯುತ
ದೇವದೂತನು ಮುಂದೆ ಬಂದನು.
ಕುಮುದಿನಿಯ ಸಂತೈಸಿಯಮರರ
ದನಿಯಲಿಂತೆಂದ:

"ತಾಯೆ ತಾಳೌ! ಬೆದರಬೇಡೌ!
ನಿನ್ನ ಭಕುತಿಗೆ ಮೆಚ್ಚಿ ಸಗ್ಗಿಗ-
ರಾಣ್ಮನೀತನನೆನ್ನೊಡನೆ ಕಳು-
ಹಿದನು. ನಿನ್ನೆಡೆಯಿರಾತನಿರುವನು ;
ಮೂರುಗಳಿಗೆಯು ಕಾಲವವಧಿಯು ;
ಮೇಲೆ ಸಗ್ಗಕೆ ಬರುವನೀತನು
ಕೂಡಿ ಎನ್ನೊಡನೆ!"
ಎಂದು ದೂತನು ಮಾಯವಾದನು
ಸತಿಯ ಕಂಗಳಿಗೆ!
"ಕಂಗಳಿಗೆ ಮರೆಯಾದನಾತನು.
ಪಾತನಾಡೈ, ರಮಣ, ವೀರನೆ!
ನಿನ್ನ ಸೊಲ್ಲನು ಕೇಳಿ ನಲಿಯುವು-
ದಂಗಳದ ಮಲ್ಲಿಗೆಯ ಬಳ್ಳಿಯು ;
ನಿನ್ನ ಬರವನೆ ಬಯಸಿ ವಿರಹದಿ
ಬಾಡಿ ಕಂದಿಹ ಹೂವುಗಿಡಗಳು
ಸಳಸಳಿಸಿ ಕೊನರೊಡೆದು ಸುಮಗಳ
ಚೆಲ್ಲುವುವು ಮೌನದಲಿ ಮಂಗಳ
ಗೇಯವನು ಬೀರಿ!
ವಿರಹದಗ್ನಿಯುಲುರಿಯುವೆನ್ನೀ
ಎದೆಯ ಸಂತೈಸಿನಿಯ ಮುದ್ದಿನ
ಮಾತುಗಳ ತಣ್ಣೆಲರ ಬೀಸುತ
ಶೈತ್ಯವನು ನೀಡಿ!
ಇನಿಯ ಬಾರೈ ; ದಿನವು ಮಲಗುವ
ಶಯನವಲ್ಲಿದೆ ನೋಡು! ಬಾರೈ!
ದಿವಿಜಪತಿ ಕಳುಹಿದುದು ಕೆಮ್ಮನೆ
ಎನ್ನ ದಿಟ್ಟಿಸಲಲ್ಲ, ವೀರನೆ,
ಮುಗುದೆಯನು ಸಂತೈಸಿ ನುಡಿಯೈ!"
ಎಂದಳಂಗನೆಯು.

"ಬರಿದೆ ಹಂಬಲವೇಕೆ, ಕುಮುದಿನಿ?
ಹರಿಯು ಕೃಪೆಯಿಂದಿಲ್ಲಿಗೆನ್ನನು
ಕಳುಹಿದುದು ಕಾಮಿನಿಯು ಕಾಮವ
ಪರಿಹರಿಸಲೆಂದಲ್ಲ; ಭಕುತಿಗೆ
ಮೆಚ್ಚಿಯಟ್ಟಿದನು!
ಸಮರದಲಿ ಮಾರಾಂತು ಮಡಿದೆನು;
ವೀರನಾಕವದೆನಗೆ ಲಭಿಸಿತು;
ಈ ವಿಯೋಗವು ಹಿಂದೆಯೆಸಗಿದ
ಕರ್ಮಫಲವೆಂದರಿತು ಸುಮ್ಮನೆ
ವಿಧಿಯ ನಾಟಕಕಡ್ಡ ಬರುವರೆ
ತಿಳಿದ ಮಾನವರು?
ಸ್ಥೂಲಕಾಯವಿದಲ್ಲ, ತರಳೆಯೆ,
ಮುಟ್ಟಲಾರೌ ದೇಹವಿದನೀ-
ನೆಳಸಬೇಡೌ ಕಾಯಸುಖಗಳ.
ಬೇರೆ ಸೊಗವಿಹುದು.
ದೇವ ನೋಡುವನೊಲವಿಸಂಬುಧಿ-
ಯಾಳವನು; ಆರ್ಭಟವನೆಣಿಸನು.
ಉಕ್ಕುತಿಹ ಕಾಮವನು ಭಕ್ತಿಯ
ಕಣ್ಣಿಯಲಿ ಬಿಗಿ, ಕಟ್ಟು; ಮಂಗಳ-
ವಾಗುವುದು ನಿನಗೆ!"
ಎಂದ ರಮಣನ ನುಡಿಯನಾಲಿಸಿ
ನುಡಿದಳಿಂದುಮುಖಿ:
"ಮುತ್ತನೊಂದನು ನೀಡು, ಕರುಣಿಸು,
ಮರಳಿ ಎನ್ನನು ವರಿಸು, ವೀರನೆ;
ಕರುಣಮೂರುತಿ ದೇವನರಿಯನೆ
ಮಾನವರ ಭಾವಗಳ ಕುಂದನು?
ತಪ್ಪ ಮನ್ನಿಸನೆ?

ಪೂರ್ವದಲಿ ಸಾವಿತ್ರಿದೇವಿಯು
ಪ್ರೇಮದಾಯುಧದಿಂದ ಗೆಲ್ಲಳೆ
ಜವನ ಕಣ್ಣಿಯುಲಿದ್ದ ಗಂಡನ
ಜೀವವಸು ಮರಳಿ?''
''ಆಗದಾಗದು, ತರುಣಿ, ಮೂರೇ
ಗಳಿಗೆಯವಧಿಯು! ಮೇಲೆ ನಿಲ್ಲೆನು;
ನಿಲ್ಲಲಾರೆನು! ದೇವನಿಯಮವ
ಮೀರಬಾರದು. ಜೀವಮಾನವ
ಕಳೆದು, ಕರ್ಮವ ಸವೆದು, ಎನ್ನನು
ಸೇರು ಸಾವಿನಲಿ!''
''ಯುಗದ ಕರ್ಮವನೆಲ್ಲ ನಿಮಿಷದಿ
ಕಳೆಯಲಾರದೆ ಗಾಢಭಕ್ತಿಯು?
ವಿಶ್ವನಿಯಮವ ಮೀರಲಾರದೆ
ಪ್ರೇಮ ಧರ್ಮದಲಿ?
ನೀನಿರದ ಜೀವವಿದು ಸಾವೈ!
ಸಾವೆ ಜೀವವು ನಿನ್ನ ಕೂಡಿರೆ!
ಬರುವೆ ನಿನ್ನೊಡನೆ!''
ಎಂದು ಮುಂಬರಿದಾಕೆ ಬರುತಿರೆ
ಕಂಡು ವೀರನು ''ಶಾಂತಳಾಗೌ,
ತರುಣಿ, ಮುಟ್ಟದಿರೆನ್ನ ಮುಟ್ಟಲು
ಸುಟ್ಟು ಸೀಯುವೆಯಾತ್ಮಹತ್ಯೆಯ
ದೋಷ ನಿನಗಹುದು!
ಹುಟ್ಟಿ ಭೂಮಿಯೊಳೊಮ್ಮೆ ಕರ್ಮದ
ಕಟ್ಟಿನಲಿ ಬೀಳುವೆಯ? ಶಾಂತಿಯ
ಹೊಂದು; ಸೊಗವಹುದು!''
ಮಾಯಮಂತ್ರದಿ ಕಟ್ಟಿದಂದದಿ
ತರುಣಿ ನಿಂತಳು ಚಲಿಸಲಾರದೆ!

ಅಮರರಾಣತಿಗಿಹುದೆ ಭಂಗವು?
ಧರ್ಮಕೆಡರಿಹುದೆ?

ದೇವದೂತನ ಬರವ ಕಾಣುತೆ
ಚೀರಿ ಬಿದ್ದಳು ಭಯದೊಳಂಗನೆ
ಮಾಯವಾಗುವ ತನ್ನ ಇನಿಯನ
ಕಂಡು ಕಂಗೆಟ್ಟು!
ಕನಸಿನೊಳು ಸುಳಿದಾಡಿ ತೆರಳುವ
ಪುರುಷರಂದದಿ ಮಾಯವಾದರು.
ಮೌನ ಹಬ್ಬಿದುದು!
ಗಗನರಂಗದಿ ಚಂದ್ರನೆಸೆದನು.
ಜೊನ್ನಜೇನಲಿ ತಿರೆಯು ತೊಯ್ದಿತು.
ಮಿಣುಕಿದುವು ತಾರೆಗಳು ತಣ್ಣೆಲ-
ರೊಯ್ಯನೊಯ್ಯನೆ ತೀಡಿತು!

ತಿಂಗಳಿನ ಬೆಳಕಿನಲಿ ತರಳೆಯ
ಕಾಯವೊರಗಿತು ಗುಡಿಯ ಜಗುಲಿಯ
ಮೇಲೆ. ಜೀವವು ಪತಿಯ ಹಿಂಬಾ-
ಲಿಸಿತು, ಕೂಡಿತು ಮರಣವಿಲ್ಲದ,
ನಿಚ್ಚಸೊಗದಾವಾಸವಾಗಿಹ,
ಮುಪ್ಪನರಿಯದ, ಯೌವನದ ನೆಲೆ-
ವೀಡದಾಗಿಹ, ವಿರಹವಿಲ್ಲದ
ಪರಮಧಾಮದಲಿ?

---

# ಜಯಸಿಂಹನ ಕೊನೆಗಾಲ *

ಇಂತು ಆ ತಪ್ಪಲೊಳು ಕದನ ಕೋಲಾಹಲವು ಹಗಲೆಲ್ಲ ಮೊಳಗಿ
ಮುಳುಗುತಿರೆ, ಮುಳುಗಿದನು ಪಡುಗಡಲಿನಂಚಿನಲಿ ದಿನಮಣಿಯು ತೊಳಗಿ.
ಕಬ್ಬಿದುದು ಮುಂಗಪ್ಪು; ಮುಸುಗಿದುದು ಬಿಳಿಮಂಜು; ಚಳಿಗಾಳಿ ತೀಡಿ
ನರಳಿದುದು ಪೂರಾಯಗಾಯದಲಿ ನೊಂದು ನರಳುವ ಭಟರ ಕೂಡಿ.
ಆ ದಿನದ ಕದನದಲಿ ಜಯಸಿಂಹ ಭೂವರನ ನೆಚ್ಚಿಗೆಯ ಸೇನೆ
ಕೆಚ್ಚಿನಲಿ ಕಾದಾಡಿ ಕೊಚ್ಚುತರಿಸಿಕರವನು ಹೆಚ್ಚುಬರೆ ಬೇನೆ
ನೊಂದು ತಿರೆಗುರುಳಿದುದು! ಮಿರ್ತ್ತುವಿನ ಕರಿನೆರಳು ರಣರಂಗದಲ್ಲಿ
ಸುಳಿದು ತಿರುಗಿತು ಕೆರಳಿ ಮೂಳೆಗಳ ಮುರಿದು ಬಿಸಿನೆತ್ತರನು ಚೆಲ್ಲಿ!
ಸಾಯುವರ ನರಳಾಟ, ಸತ್ತವರ ಚೀರಾಟ, ಮರುಳುಗಳ ಕಾಟ,
ಸಾಯುತಿಹರೆದೆಯೆಲುಬುಗಳ ಮುರಿವ ಹಸಿದ ಶಿವಗಣದ ಕೂಗಾಟ,
ಮಜ್ಜೆ, ನೆತ್ತರು, ಮಾಂಸ, ಮುರಿದ ಕೂರಸಿಗಳಿಂದಿಡಿದಗುವಾರ್ಯುತ್ತು
ಭೀಕರದ ರಣರಂಗ! ಕೊಳುಗುಳದೊಳೆಚ್ಚಾಡಿ ಗಾಯದಲಿ ನೊಂದು,
ಮರಸೊಂದಿ, ಮುಚ್ಚೆ ತಿಳಿದೇಳಲಾರದೆ ಬಿದ್ದು, ನೆತ್ತರಲಿ ಮಿಂದು
ಮಲಗಿದ್ದ ಜಯಸಿಂಹ ಭೂಪತಿಯು ಬಳಿಗೆ ರಣವೀರನೈತಂದು,
ಮೆಲ್ಲಗಾತನನೆತ್ತಿ, ಪಾಳುಬಿದ್ದಾ ಬಳಿಯ ಗುಡಿಯೊಳಗೆ ಬಂದು,
ಸುರಿವ ಕೆನ್ನೀರೊರಸಿಯುಪಚರಿಸಿದನು ಮರುಗಿ ಮನನೊಂದು ಬೆಂದು!
ಕೆರಳಿತೊಂದೆಡೆ ಬಿತ್ತರದ ಕಡಲು; ಪಸರಿಸಿತು ಮಿರುಗಿ ಮತ್ತೊಂದು
ದಿಕ್ಕಿನಲಿ ಮೆರೆವ ಕಮಲಾಕರವು; ಮೇಣೆಸೆದುದಂಬರದೊಳಿಂದು!
ಕಣ್ದೆರೆದು, ನೋಡಿ ರಣವೀರನನು, ನುಡಿದನವನೀಶನಿಂತೆಂದು:—

"ಬಳಿಗೆ ಬಾರೈ ಗೆಳೆಯ, ವೀರ, ರಣವೀರ,
  ನುಡಿಯಲಾರೆನು, ಕೇಳು ಕಿವಿಗೊಟ್ಟು, ಶೂರ!
ಸೇನೆಮಡಿದುದು; ವೀರರಳಿದಿಹರು; ನೀನೊಬ್ಬ-
  ನಲ್ಲದಿನ್ನಾರ ನಾ ಕಾಣೆನಿಲ್ಲಿ.
ಜವನಿದ್ದೆಯಲ್ಲಿಹರು ನಮ್ಮ ನೆಚ್ಚಿನ ಭಟರು;
  ಮರಳಿ ರಣರಂಗದಲಿ ಕಾದದವರು.

---

* ಟೆನ್ನಿಸನ್ ಕವಿಯ 'Morte D' – Arthur' ಎಂಬ ಕವನದ ಭಾಷಾಂತರ.

ಮುಂದೆ ಎಂದೆಂದಿಗೂ ಕೆಚ್ಚೆದೆಯ ಮಾತುಗಳ-
ನಾಲಿಸೆವು; ಮಿಂಚುತಿಹ ಕೂರಸಿಗಳ,
ಕವಿಯುತಿಹ ಸರಳುಗಳ, ಹೊಳೆಯುತಿಹ ಕೈದುಗಳ,
ಕಾಳಗಲೀಲೆಯ ಮುಂದೆ ಕಾಣೆವಿನ್ನು.
ಶೋಕವನು ಬಿಡು; ಬಿದಿಯ ಕಟ್ಟಳೆಗೆ ತಲೆಬಾಗು,
ನಾಕವೆಂಬುದೆ ಸಾಹಸಿಗೆ ಸಮರವೆಂದರಿತು
ವ್ಯಾಕುಲತೆಯನು ನೀಗು. ನಿನ್ನೆದೆಯ ಗೆಳೆಯನಿಗೆ
ಕಡೆಯ ಕಜ್ಜವಮಾಡು, ಶಾಂತನಾಗು!
'ಮಾಕಾಳಿ' ಹೆಸರಿನೀ ಎನ್ನತುಳ ಕೂರಸಿಯ
ನೀ ಕೊಂಡು, ಬಳಿಯ ಕಮಲಾಕರವ ಸೇರಿ,
ಏಕೆಂದು ಕೇಳದಲೆ, ಕೊಳದೆದೆಯೊಳೆಸೆದು, ತಾ
ಕೌತುಕದ ಸುದ್ದಿಯನು; ಹೋಗು ಬೇಗ!
ಹಿಂದೆ ನಾನೊಂದುದಿನ ಬೇಸಗೆಯ ಸಮಯದಲಿ
ಬಂದೆನೀ ಕೊಳದೆಡೆಗೆ ನೀರೀಂಟಲೆಂದು;
ಚಂದದಲಿ, ಮೋಹದಲಿ, ನೇಹದಲಿ, ಕೋಮಲದ
ಕೆಂದಳಿರ ಕೈಯೊಂದು ಮೇಲ್ಮೂಡಿ ಬಂದು,
'ಮಾಕಾಳಿ' ಎಂಬ ಈ ಕೂರಸಿಯನೆನಗಿತ್ತು
ಮುಳುಗಿದುದು ಮರಳಿ ಕೊಳದಾಳದಲ್ಲಿ!
ದೊರೆಯಂತೆ ಧರಿಸಿದೆನು ಮಾಕಾಳಿ ಕೂರಸಿಯ;
ಧರುಮದಲಿ ಜಯಿಸಿದೆನು ಮಾಕಾಳಿಯಿಂದ.
ಬರುವ ಕಾಲದೊಳೆನ್ನ ಕೀರ್ತಿಯನು ಹಾಡುವರು,
ಮರೆಯಲಾರರು ನನ್ನ ಕೂರಸಿಯ ಕತೆಯ!
ತೆರಳು, ನಡೆ, ಸರಸಿಯೆಡೆಗೈತಂದು ಬಿಸುಡಿ, ತಾ,
ನೀ ಕಾಂಬ ಕೌತುಕದ ಕತೆಯ ಪರಿಯ.
ಇಂತೆಂದ ನರಪತಿಯ ನಿಟ್ಟಿಸುತ ಮರುಗಿ,
ರಣವೀರನಿಂತೆಂದು ನುಡಿದನೆದೆಕರಗಿ:
"ಗಾಯದಲಿ ನರಳುತಿಹ ನಿನ್ನನೆಲೆದೇವ,
ನೆರವಿಲ್ಲದಿಂತು ನಾನಗಲುವುದು ತರವೆ?

ನರಳುತಿಹ ನಿನ್ನ ನಗಲಲು ಕಜ್ಜ ಕೆಡದೆ?
ಆದೊಡೆಯುಂ ತೆರಳುವೆನು ನಿನ್ನಾಣೆಯಂತೆ!
ಕೂರಸಿಯ ಬಿಸುಡುವೆನು; ಸುದ್ದಿಯನು ತರುವೆ!"

ಇಂತೆನುತ ರಣವೀರನಾ ಮಹಾಕೈದುವನು ಕೈಯಲ್ಲಿ ಹಿಡಿದು,
ತಿರುತಿರುಗಿ ನರಪತಿಯ ದಿಟ್ಟಿಸುತ, ಪಾಳಾದ ಗುಡಿಯಿಂದ ನಡೆದು,
ತಿಂಗಳಿನ ಮಬ್ಬಾದ ಬೆಳಕಿನಲಿ ಮಡಿದವರ ನಡುನಡುವೆ ಹಾರಿ,
ಚೀರುತಿಹ ಕಡಲ ಚಳಿಗಾಳಿಯಲಿ ಹೆಪ್ಪಾದ ಬಸೆಯಲ್ಲಿ ಜಾರಿ,
ಡೊಂಕಾದ ದಾರಿಗಳ, ಮೊನೆಚಾದ ಬಂಡೆಗಳ, ತೊಳತೊಳಲಿ ಬೇಗ
ತಿಂಗಳೊಳು ತಳಿಸುತಿಹ ಬಿತ್ತರದ ಸರಸಿಯೆಡೆಗೈತಂದನಾಗ!
ನಿಂತಲ್ಲಿ ರಣವೀರನಾ ಬಾಳನೊರೆಯಿಂದ ಕಳಚಿದನು; ಕೂಡೆ,
ಮುಗಿಲಿನಂಚನು ಕಳೆದು ತಣ್ಗದಿರನುಕ್ಕುತಿಹ ಕಾಂತಿಯಲಿ ಮೂಡೆ,
ವಜ್ರವೈಡೂರ್ಯಾದಿ ಮುತ್ತುಗಳ ಕೆತ್ತನೆಯ ಖಂಡೆಯದ ಪೆಂಪು
ಮಿರುಗಿ ಮಿಂಚಿತು; ತೊಳಗಿ ರಂಜಿಸಿತು, ಕಂಡುಬರೆ ಮಳೆಬಿಲ್ಲಿನಿಂಪು!
ಬಿಸುಡೆ ಕೈನೆಗಹಿದನು; ಮನಮೋಹಿಪಾ ಬೆಡಗ ನೋಡಿ, ನೆರೆನೋಡಿ,
ಮೋಹದಲಿ ಕವಲೊಡೆದು ಬಗೆ ಕದಡಿ, ನಿಂತನಾಲೋಚನೆಯ ಮಾಡಿ.
ಕಡೆಗಾ ಮಹಾಬಾಳನಡಗಿಪುದೆ ಲೇಸೆಂದು ಚಿತ್ತದಲಿ ಬಗೆದು,
ಬಿಸುಡದಲೆ ಬೈತಿಟ್ಟನಾದಡದ ದಟ್ಟಜೊಂಡಿನ ಮೆಳೆಯ ದೊಗೆದು!
ಇಂತೆಸಗಿ ಮರಳಿದನು ದೊರೆಯೆಡೆಗೆ ಬೇಗ;
ಕಂಡು ರಣವೀರನನು ದೊರೆಯೆಂದನಾಗ:

"ಏನು ಮಾಡಿದೆ ಹೇಳು ವೀರನೆ? ಎಸೆದೆಯೋ 'ಮಾಕಾಳಿ'ಯ?
ಏನು ನೋಡಿದೆ ಹೇಳು! ಕೌತುಕವೇನು? ಕೇಳಿದೆಯೇನನು?"
ಇಂತೆಂದ ನರಪತಿಗೆ ಬಾಗಿ
ರಣವೀರ ನನ್ನಿಯನು ನೀಗಿ:
"ತೆರೆಗಳಾಡುತ ಬಂದು ಜೊಂಡಿಗೆ ತಾಗಿ ಮೊರೆವುದ ಕೇಳಿದೆ!
ಮರುಗಿ ನೊರೆನೊರೆಯಾಗಿ ಬಂಡೆಯ ಬಡಿವ ನೀರನು ನೋಡಿದೆ!
ಇಂತೆಂದ ದಳಪತಿಯ ನೋಡಿ, ನೋಡಿ,
ಜಯಸಿಂಹನಾಡಿದನು ಬಳಲಿ, ಬಾಡಿ:

"ಮರೆತು ಧರ್ಮವನಿಂತು ಪುಸಿಯನು ನುಡಿವರೇ ರಣವೀರನೆ?
ನಿನ್ನ ಪಾರ್ಥಿವತನವ ಸುಡು, ಸುಡು! ಲೋಭಿಯಾದೆಯ ತುದಿಯಲಿ?
ಕಾಣಲಿಲ್ಲವೆ ಕೈಯ? ವಾಣಿಯ ಕೇಳಲಿಲ್ಲವೆ? ಕೊಳದಲಿ
ಕುರುಪನೊಂದನು ನೋಡಲಿಲ್ಲವೆ? ಬಿಸುಡಿದುದೆ ಸಟೆ; ಬಲ್ಲೆನು!
ಕ್ಷತ್ರಿಯನು ನೀ ಸಟೆಯ ನುಡಿವುದೆ? ನಾಚಿಕೆಯೆ ನಿನಗಿಲ್ಲವೆ?
ಇರಲಿ, ನಡೆ; ಮನ್ನಿಸುವೆ, ಬೆಸಸುವೆನೊಮ್ಮೆಯಾಪ್ತನು ನೀನಹೆ:
ಮರಳಿ ಕೊಳವನು ಸೇರಿ, ಬಾಳನು ಬಿಸುಟು, ಸುದ್ದಿಯನು ತಾ, ನಡೆ!"

ದೊರೆಯ ಮಾತನು ಕೇಳಿ ನಾಚುತ ರಣದ ವೀರನು ಬಂದು ಕೊಳದೆಡೆ-
ಗಲ್ಲಿ ಬೈತಿಟ್ಟಸಿಯ ಕೊಂಡನು ಕೈಲಿ, ನೋಡಿದನು.
ತರತರದ ಬಣ್ಣಗಳ ಹೊಳಪನು ಕಂಡು, ಕತ್ತಿಯ ಮೆಚ್ಚಿ ಮನದಲಿ,
ಮರುಗಿ, ಬಾಳನು ಬಿಸುಡಲಾರದೆ ಚಿಂತಿಸಿದನಿಂತು:

"ಬಿಸುಡಲೀ ಕೈದುವನು ನಷ್ಟವು ಧರೆಗೆ ದಿಟವದು! ಧಾರಿಣಿಯೊಳೊಂ-
ದತುಲವಸ್ತುವನೆಸೆದ ಪಾತಕಿಯಾಗುವೆನು ನಾನು.
ಬಿಸುಡದೆಯೆ ನಾನಿಂದು ಪೊರೆದರೆ, ಮುಂದೆ ಕಾಲಾಂತರದೊಳಸಿಯನು
ಭೂವರನ ಜಯಸಿಂಹಸಸಿಯೆಂದೊಲಿದು ಹಿಗ್ಗುವರು.
ಬಿಸುಡಲಾಗುವುದೇನು? ಮುಚ್ಚಿಡಲಿದನು ಹೋಗುವುದೇನು? ನೃಪತಿಯ
ಮಾತ ಮೀರುವುದುಚಿತವಲ್ಲವೆ ವೀರ ಪಾರ್ಥಿವಗೆ?
ದೊರೆಯ ಕಡುಕನು ದೊರೆಯೆ ಬಯಸಿದರರದನು ಕೈಕೊಂಡೆಸಗೆ ಧರ್ಮವೆ
ತನ್ನ ಹಿತವನು ತಾನೆ ಅರಿಯನು ಹೆಚ್ಚಿದಳಲಿನಲಿ!
ಕತೆಯ ಹೇಳುವರಿದನು ತೋರುತ ದೊರೆಯ ಕೀರ್ತಿಯ ಹೊಗಳುವರು; ಮೆ-
ಣೆದನು ಕೊಳದೊಳಗೊಬ್ಬ ಬಾಲೆಯು ರಚಿಸಿ ಕೊಟ್ಟುದನು
ಮುದುಕರಾದವರೊರೆವರೆಳೆಯರ ಕುರಿತು. ನಾನಿದನಿಂದು ಬಿಸುಡಲು
ದೊರೆಯ ಚರಿತೆಯ ತೋರ್ಪ ಚಿಹ್ನೆಗಳೊಂದು ಕಾಣದೆಯೆ
ಕಟ್ಟುಕತೆಯಾಗುವುದು ಚರಿತೆಯು! ಅಸಿಯನಿದನಾನೆಸೆಯಲಾಗದು!
ನೃಪತಿಯಾಜ್ಞೆಯ ಮೀರಿ ನಡೆವೆನು ದೂರದೃಷ್ಟಿಯಲಿ!"—
ಲೋಭದಲಿ ರಣವೀರನಿಂತೆಂದು ಬಗೆದು,
ಕೂರಸಿಯನಿನ್ನೊಮ್ಮೆ ಜೊಂಡಿನಲಿ ದೊಗೆದು,

ನೋವಿನಲಿ ನರಳುತಿಹ ದೊರೆಯೆಡೆಗೆ ಬಂದು,
ನಿಲಲು ಕಂಡವನೀಶನೊರೆದನಿಂತೆಂದು :
"ಏನು ಮಾಡಿದೆ ಹೇಳು ವೀರನೆ? ಎಸೆದೆಯೋ 'ಮಾಕಾಳಿ'ಯ?
ಏನು ನೋಡಿದೆ ಹೇಳು! ಕೌತುಕವೇನು? ಕೇಳಿದೆಯೇನನು?"—

ಇಂತೆಂದ ನರಪತಿಗೆ ಬಾಗಿ
ರಣವೀರ ಸನ್ನಿಯನು ನೀಗಿ:
"ಮರುಗಿ ನೊರೆನೊರೆಯಾಗಿ ಬಂಡೆಗೆ ಬಡಿವ ನೀರನು ನೋಡಿದೆ!
ತೆರೆಗಳಾಡುತ ಬಂದು ಜೊಂಡಿಗೆ ತಾಗಿ ಮೊರೆವುದ ಕೇಳಿದೆ!"
ಕೇಳುತ್ತ ಕೋಪದಲಿ ದುಃಖದಲಿ ನೊಂದು,
ದಳಪತಿಯ ನೋಡಿ ಜಯಸಿಂಹನಿಂತೆಂದು:
"ನನ್ನಾಣತಿಯ ಬಲವಳಿದು ಹೋಯ್ತು! ಹಾ ವಿಧಿಯೆ,
ತುದಿಯಲ್ಲಿ ನನ್ನ ಗತಿಯಿಂತುಟಾಯ್ತು!
ಧಿಕ್ಕರಿಸಿ ನೂಕುವರು, ಲೆಕ್ಕಿಸರು ಸೇವಕರು,
ಮರೆಯುವರು ದರ್ಪ ಬಲವಳಿದ ಮೇಲೆ!
ಎಲೆ ದುರುಳ, ಎಲೆ ಪಾಪಿ, ನಿರ್ದಯನೆ, ರಣವೀರ,
ಕಡೆಯ ಸೇವೆಯೊಳೆನ್ನ ಪೀಡಿಸುವುದೆ?
ತರಳೆಯಂದದಿ ನೀನು ಹೊಳೆವ ಕತ್ತಿಯ ಕಂಡು
ಮೋಹಿಪುದೆ ವಿಾರಿ ನನ್ನಾಣತಿಯನು?
ಎರಡು ಸಲ ಎಡವಿದರು, ಮೂರನೆಯ ಸಲ ನೀನು
ಮುಗ್ಗರಿಸಿ ಬೀಳದಿರಬಹುದು; ತೆರಳು!
ಕೂರಸಿಯನೆಸೆಯದಲೆ ನೀ ಬಂದರೀಯೆಡೆಗೆ
ಕಡಿದು ಕೆಡಹುವೆ ನಲಹಿದೀ ಕೈಯಲಿ!"
ಜವದಿಂದ ಮೇಲೆದ್ದು ರಣವೀರನೋಡುತ್ತ ಸರಸಿಗೈತಂದು
ಜೊಂಡಿನಲಿ ಬೈತಿಟ್ಟ ಕೂರಸಿಯ ಮೇಲೆತ್ತಿ, ಕಣ್ಮುಚ್ಚಿ ನಿಂದು,
ಗಿರಗಿರನೆ ತಿರುಗಿಸುತ ಬೀಸಿದನು ಕೈಬಿಟ್ಟು. ಕಣ್ದೆರೆದು ಕೂಡೆ
ಬೆಳ್ಮಿಂಚಿನಂದದಲಿ ಸುತ್ತಿ ಚಿಮ್ಮುತ ಸಿಡಿವ ಕೈದುವನು ನೋಡೆ,
ಗಗನಾಂತರಾಳದೊಳು ಭರದಿಂದ ಸಂಚರಿಪ ನಕ್ಷತ್ರದಂತೆ,

ಕೊಳದೆದೆಯ ಕನ್ನಡಿಯೊಳೆಸೆಯುತ್ತ, ಗೆರೆಯೆಳೆದು ಕುಡಿಮಿಂಚಿನಂತೆ,
ಗುಳುಗುಳಿಸಿ ಮುಳುಗುತಿರೆ, ಕೈಯೊಂದು ಸರಸಿಯಿಂ ಮೇಲೆದ್ದು ಬಂದು,
ಚಂದದಲಿ, ಮೋಹದಲಿ, ನೇಹದಲಿ 'ಮಾಕಾಳಿ'ಯನು ಧರಿಸಿ ನಿಂದು
ಗಿರಗಿರನೆ ತಿರುಗಿಸುತ ಮೂರುಸಲವಡಗಿದುದು ಕೊಳದಾಳದಲ್ಲಿ!
ಬೆಕ್ಕಸಂಬಟ್ಟು ರಣವೀರನೈತಂದು ನಿಲಲರಸನೆಡೆಯಲ್ಲಿ,
ದಳಪತಿಯು ನಗುಮೊಗವನಾನಂದದಿಂದ,
ದಿಟ್ಟಿಸುತ ಜಯಸಿಂಹನವನಿಗಿಂತೆಂದ:
"ಈಗ ನಿನ್ನೀ ಕಣ್ಣ ಕಾಂತಿಯೆ ನುಡಿವುದೆಸಗಿದ ಕಜ್ಜವ!
ಏನು ನೋಡಿದೆ ಹೇಳು! ಕೌತುಕವೇನು? ಕೇಳಿದೆಯೇನನು?"

ಇಂತೆಂದ ನರಪತಿಗೆ ಕೈಮುಗಿದು ಬಾಗಿ,
ರಣವೀರನೆಂದನಾವೇಶವಶನಾಗಿ:
"ಎಂಬೆನೇಂ? 'ಮಾಕಾಳಿ' ಕತ್ತಿಯು ಕೌತುಕದ ಪರಿಯ
ಜನ್ಮಜನ್ಮದಿಯುದಿಸಿ ಬಂದರು, ಮುಂದೆ ನಾಕಾಣೆ!
ಮನವ ಮೋಹಿಸದಂತೆ ಮುತ್ತಿನ ಕೆತ್ತನೆಯ ಕತ್ತಿ,
ಜೀಯ, ಕಂಗಳ ಮುಚ್ಚಿಕೊಂಡೆನು; ಮತ್ತೆ ಬೀಸಿದೆನು.
ಮರಳಿ ಕಣ್ದೆರೆದದರ ಮಿಂಚಿನ ಪಥವ ನೋಡುತಿರೆ,
ಕೋಮಲದ ಕೈಯೊಂದು ಕೊಳದೆದೆಯಿಂದ ಮೂಡಿದುದು!
ಚಂದದಲಿ, ಮೋಹದಲಿ, ನೇಹದೊಳಸಿಯ ಕೈಲಾಂತು
ಮೂರುಸಲ ಗಿರಗಿರನೆ ತಿರುಗಿಸಿ ಕೊಳದೊಳಡಗಿದುದು!"
ಮಮತೆಯಲಿ, ಹರುಷದಲಿ, ಗೆಳೆಯನನು ನೋಡಿ,
ಜಯಸಿಂಹನಿಂತೆಂದನಾತನನು ಬೇಡಿ:
"ಸನ್ನಿಹಿತವಾಗಿಹುದು ತುದಿಯ ಕಾಲವು ನನಗೆ;
ತಡವ ಮಾಡದೆ ಬೇಗ ಕೊಳದ ತಡಿಗೆ
ಹೆಗಲೊಳೆನ್ನನು ಹೊತ್ತು ಕೊಂಡೊಯ್ದಿರಿಸು, ಗೆಳೆಯ!
ಗಾಯದಲಿ, ಚಳಿಯಲ್ಲಿ ಬದುಕಲಾರೆ."

ಇಂತೆಂದು ನೋವಿನಲಿ ನರಳುತಿಹ ನರಪತಿಯು ಕೈಯೊಂದನೂರಿ,
ಬಿಚ್ಚಿದೆವೆಗಳ ಮುಚ್ಚದಲೆ, ಬರೆವ ಚಿತ್ತಾರದಂದದಲಿ ತೋರಿ,
ಮೇಲೇಳಲೆಳಸುತಿರೆ, ಬಯಕೆಗಣ್ಣನು ಬೀರಿ, ಮಿತ್ರನನು ನೋಡಿ;
ಎದೆಯೊಳುಕ್ಕುವ ದುಃಖವನು ತಡೆದು, ಕಂಬನಿಯ ಸೂಸುತ್ತ, ನೀಡಿ
ಕರಯುಗವ, ನುಡಿಯದಲೆ ಮೌನದಲಿ ಬಗ್ಗಿ ದೊರೆಯನು ಹೆಗಲೊಳಿಟ್ಟು,
ರಣವೀರನೈತಂದನಾ ಸಮರಭೂಮಿಯಲಿ ದೇಗುಲವ ಬಿಟ್ಟು!
ಸದ್ದಿಲ್ಲದಿರುಳಿನಲಿ ಮನೆಯಲ್ಲಿ ಕನವರಿಸಿ ನರಳುವವನಂತೆ,
ಹೆಗಲೊಳೇರಿಸಿ ಕೊಳಕೆ ರಣವೀರನೊಯ್ಯುತಿರೆ, ದೊರೆಯು ಬಿಸುಸುಯ್ದು
ನರಳಿದನು ನೋವಿನಲಿ; ಬೇಗಬೇಗೆಂದೆನುತ ಮಿರ್ತ್ಯುವಿನ ಚಿಂತೆ
ಮೂಡಿಬರೆ ಚಿತ್ತದಲಿ, ಸುಯ್ಯೆಂದು ಕೊರೆವ ಚಳಿಗಾಳಿಯನು ಬಯ್ದು!
ದೊರೆಯುತ್ತಮಾಂಗದಿಂದಿಳಿವ ನೆತ್ತರ ಹೊಳೆಯು ಜಲಜಲನೆ ಚೆಲ್ಲಿ,
ಜವದಿಂದ ಬಂಡೆಗಳ ನೆಗೆನೆಗೆದು ಮುಗ್ಗರಿಸಿ, ಬಿಳಿಮಂಜಿನಲ್ಲಿ
ಮನುಜರೂಪವ ಮಿಾರಿ, ಹಿರಿದಾಗಿ ತೋರಿ, ಸಾಗುವ ವೀರನುಡೆಯ
ತೋಯಿಸಿತು; ಮಿಾಯಿಸಿತು ಕೆನ್ನೀರಿನಲಿ ನಡೆದ ಕಿರುದಾರಿಯೆಡೆಯ!
ಅವನ ಬಲಗಡೆ ಬಂಡೆ, ಅವನ ಎಡಗಡೆ ಬಂಡೆ, ಕೆಳಗೈಕಿಲುಂಡೆ;
ಬಂಜರಿನ ಭೂಮಿಯದು ಕಣ್ಗಾಗ್ಯುತ್ತ ಬೋಳಿಸಿದ ಮಿತ್ಯುವಿನ ಮಂಡೆ.
ರಣವೀರನೈದುತಿರೆ ಜಾರುಗಲ್ಲೊಳು, ಲೋಹದಾಯುಧಗಳಾಳಿ
ಶಿಲೆಗಳಿಗೆ ಬಡಿಬಡಿದು ಖಣಿಲೆಂದು ಚೀರಿದುವು; ನಡುಗಿ ಚಳಿಗಾಳಿ
ರೋಗಿಯಂದದಿ ಕೂಗಿ ಬೀಸಿದುದು. ಮೊರೆದು ನರಳಿತು ಕಡಲು ಹಿಂದೆ
ರೋದನದ ದನಿಯೊಂದು ಮೆಲುಮೆಲನೆ ಮೇಲೇರಿ ಪಸರಿಸಿತು ಮುಂದೆ!
ಕಂಗೊಳಿಸಿತನಿತರೊಳೆ ಕೊಳವು ನೀರಾದ ಕನ್ನಡಿಯ ತೆರದಿಂದ,
ತೆರೆತೆರೆಗು ಹಬ್ಬಿ ತಳತಳಿಸುತಿಹ ಚಂದ್ರಿಕೆಯ ಹೊಂಬಣ್ಣದಿಂದ!
ಆ ಬಿತ್ತರದ ಸರೋವರದೆದೆಯ ಮೇಲೊಂದು, ರಮಣೀಯವಾಗಿ
ಪಡಿದಿಂಗಳೆಂಬಂತೆ ತೇಲಿ ಬಹ ದೋಣಿಯಿರೆ, ಬೆಪ್ಪುಬೆರಗಾಗಿ
ನೋಡಿದನು ರಣವೀರನೆವೆಯಿಕ್ಕದಲೆ ಮುಂದಕಡಿಯಿಡಲು ಮರೆತು!
ವಿಸ್ಮಯಾನ್ವಿತನಾಗಿ ನೋಡಿ, ನೆರೆ ನೋಡಿದನು, ಹಿಗ್ಗಿ ಮೈಮರೆತು!
ಸಿಂಗರಿಸಿದಾ ದೇವನೌಕೆಯಲಿ ಪೊಂದೊಡಿಗೆಗಳನು ಕಳಚಿಟ್ಟು,

ಮಂಗಳದ ದಿವ್ಯಮೂರ್ತಿಗಳಾರು ತೋರಿದರು ಕರಿಯುಡೆಯ ಸುಟ್ಟು.
ಬಳಿಯಲ್ಲಿ ಮಣಿಮಕುಟಗಳನಾಂತು, ಕಾಂತಿಯಲಿ ಸೊಬಗಿನಲಿ ಮೀರಿ,
ಕಂಗೊಳಿಸಿದರು ಮೂವರರಸಿಯರು! ದೋಣಿಯಿಂದೊಯ್ಯೊಯ್ಯನೇರಿ
ಗೋಳಿಡುವ ದನಿಯೊಂದು ಚಳಿಗಾಳಿಯಲಿ ಹಬ್ಬಿ, ಬಾಂದಳವ ಸೇರಿ
ಮರುದನಿಯ ಬೀರಿತ್ತು ಗುಹೆಗಳೊಳು ಮೊರೆದು, ಬಳಿಯರೆಗಳನು ತಾಗಿ!
ರಣವೀರನೊಯ್ಯೊಯ್ಯನೊಯ್ದಿಳಿಸಿದನು ದೊರೆಯ, ಕೊಳದ ಬಳಿ ಬಾಗಿ!
ದಡದೆಡೆಗೆ ತೇಲಿ ಬರಲಾ ನಾವೆಯವನೀಶ ಮಿತ್ರನನು ನೋಡಿ,
"ನೌಕೆಯಲಿ ಇರಿಸೆನ್ನ" ಎನಲೆತ್ತಿದನು. ತಮ್ಮ ಕೈಗಳನು ನೀಡಿ
ಮೂವರರಸಿಯರವನ ನೆಗಹಿದರು ಕಂಬನಿಯ ಕರೆದು ಗೋಳಾಡಿ;
ಕರಿನೆತ್ತರೊಸರುತಿರಲೊರಸಿದರು; ಬಲಿದ ಮೋಹದಲಿ ಮೊಗನೋಡಿ,
ದುಃಖದಲಿ, ಕರುಣೆಯಲಿ, ಪ್ರೇಮದಲಿ, 'ಜಯಸಿಂಹ', ಎಂದು ಮಾತಾಡಿ,
ಸಮರದಲಿ ಸೀಳಿದ ಕುಲಾವಿಯನು ಕಳಚಿದರು ನೊಂದು, ಮುದ್ದಾಡಿ!
ಅವರಲ್ಲಿ, ಸೊಬಗಿನಲಿ, ಕಾಂತಿಯಲಿ, ಹರೆಯದಲಿ ಹಿರಿದಾದ ದೇವಿ
ಭೂವರನ ಗಾಯವಡೆದುತ್ತಮಾಂಗವ ತನ್ನ ತೊಡೆಯಲಿಟ್ಟೋವಿ
ಕಣ್ಣೀರ ಸುರಿಸಿದಳು, ಬಿಸುಸುಯ್ದು, ಕಡುನೊಂದು, ದುಃಖಾರ್ತೆಯಾಗಿ;
ಬೆಳಗಿನಿಂದುವಿನಂತೆ ಮಲಗಿದನು ನರಪತಿಯು ಮೊಗ ಬೆಳ್ಳಗಾಗಿ!
ದುಂಬಿಗಳ ಕರಿಮೆಯ್ಯನೇಳಿಸುವ ಮುಂಗುರುಳು ಮುತ್ತಿರುವ ಹಣೆಯು
ನೀರದಗಳಂಚಿನಲಿ ರಂಜಿಸುವ ಪೊಳ್ತಿಡೆಯ ರವಿಗಾದುದೆಣೆಯು!
ಮಿಂಚಿ ಬಳುಕುವ ತನ್ನ ಕೂರಸಿಯ ಕೈಲಾಂತು ರಣರಂಗದಲ್ಲಿ,
ಎಳೆಯ ಬಾಳೆಯ ಬನವ ಬಾಲಕನು ಬಿನದಕಾಗಿಯೆ ಸವರುವಂತೆ,
ಮುರಿದಿಕ್ಕುತರಿಭಟರ, ಗೆಲ್ವೆಣ್ಣನೆಳೆದೊಯ್ವ ಜಯಸಿಂಹನಲ್ಲಿ,
ಸುಂದರಿಯ ತೊಡೆಯಮೇಲೊರಗಿದನು ತಿರೆಗುರುಳಿದೊಂದು ದಳದಂತೆ!

ತಬ್ಬಲಿಯ ತೆರದಿಂದೆ ರೋದಿಸುತ, ಕಂಬನಿಯ ಸೂಸುತಳಲಿಂದ,
ಪೊರಮಡುವ ತನ್ನೊಡೆಯನನು ನೋಡಿ, ನೋವಿನಲಿ ರಣವೀರನೆಂದ:
"ಹೇ ಜೀಯ, ಗತಿಯಾವುದಿನ್ನೆನಗೆ? ಹೇ ದೇವ, ಮರೆಗೊಳ್ವೆನೆಲ್ಲಿ?
ಹಳೆಯ ಯುಗವಳಿಯುತಿದೆ; ಹೊಸಯುಗವು ಮೂಡುತಿದೆ ಧಾರಿಣಿಯೊಳಿಲ್ಲಿ!
ಮುಂದೆ ನನ್ನಿಯ ಕಾಣೆನಾಚಾರವಳಿಯುತಿದೆ, ಮುಳುಗುತಿದೆ ಧರ್ಮ!

ಈ ದಿನದ ಸೋಲಿನಲಿ ಮಾಯವಾದುದು ಪಾರ್ಥಿವರ ವೀರಕರ್ಮ !
ಕಾರಿರುಳು ಕವಿಯುತಿದೆ ; ದಾರಿಗಾಣುವುದೆಂತು ಟಡಿಯಿಡುವುದೆಂತು ?
ಹಳೆಯುಗದ ಜೊತೆಗಾರರಿಲ್ಲದಲೆ ಬದುಕಿ ಬಾಳುವುದಿಳೆಯೊಳೆಂತು ?
ಹೊಸಕಾಲ, ಹೊಸಬಾಳು, ಹೊಸಜನವು, ಹೊಸಮನವು, ಹೊಸದಿಟ್ಟಿ-
ಯಿಂತು ಜಗವೆಲ್ಲ ಹೊಸದಾಗಿ ಮೈದೋರಲದರಲ್ಲಿ ಹಳೆಯದಿಹುದೆಂತು ?''

ಇಂತೆಂದ ಮಿತ್ರನನು ಕರುಣೆಯಲಿ ನೋಡಿ
ಸಂತೈಸಿದನು ದೊರೆಯು ಮೆಲನೆ ಮಾತಾಡಿ :

''ಮುಳುಗುವುದು ಹಳೆಯುಗವು ; ಮೂಡುವುದು ಹೊಸಯುಗವು,
ಧರ್ಮಸಂಸ್ಥಾಪನೆಯ ಕಟ್ಟಳೆಯಿದಿಂತು !
ಜಗದೊಡೆಯನಾವಾವ ರೀತಿಯಲಿ ಧರ್ಮವನು
ನೆಲೆಗೊಳಿಪನೆಂಬುದಕೆ ಮಿತಿಯೆಂಬುದಿಲ್ಲ !
ಒಂದೇ ಸದಾಚಾರವೀ ಭೂಮಿಯನ್ನಾಳಿ
ಜೀವನದ ರಸಗೆಡಿಸಿ, ಕುಲಗೆಡಿಸದಂತೆ,
ಧರ್ಮವೆಂಬುದು ಬಹಳ ರೂಪಗಳ ಹೊಂದುವುದು
ಕಾಲದೇಶಗಳೆಂಬ ನಿಯಮವನುಸರಿಸಿ !
ತಿಳಿದಿದನು ಶಾಂತನಾಗಿರು ! ನನ್ನ ಶಾಂತಿಯಿದು :
ನಿಂದಿಸದೆ ಜೀವವನು ಬಾಳಿ ಬದುಕಿಹೆನು !
ನಿಷ್ಕಾಮ ಬುದ್ಧಿಯಲಿ ಕರ್ಮಗಳನೆಸಗಿಹೆನು ;
ಭಕ್ತಿಯಲಿ ಜಗದೊಡೆಯಗರ್ಪಿಸಿಹೆನೆಲ್ಲ !
ಮುಂದೆನ್ನ ನೋಡದಿರೆ, ಜಗದೀಶನನು ಬೇಡು !
ನನಗಾಗಿ ಕೈಮುಗಿದು ಪ್ರಾರ್ಥನೆಯ ಮಾಡು !
ಪ್ರಾರ್ಥನೆಯ ಮಹಿಮೆಯನು ಲೋಕವರಿಯದು, ಗೆಳೆಯ ;
ಪ್ರಾರ್ಥನೆಯು ಸಾಧಿಸದ ಕಾರ್ಯವೊಂದಿಲ್ಲ !
ಹಗಲಿರುಳು, ನನಗಾಗಿ ನಿನ್ನ ಭಕ್ತಿಯ ವಾಣಿ,
ಬುಗ್ಗೆಯಂದದಿ ಸಗ್ಗದೆಡೆಗೇರುತಿರಲಿ !
ದೇವನಿಹನೆಂದರಿತ ಮಾನವರು, ಭಕ್ತಿಯಲಿ

ಕೈಮುಗಿದು ತಲೆಬಾಗಿ ಬಿನ್ನಹವ ಮಾಡದಿರೆ;
ಬೇಡದಿರೆ ಮನ್ನಣೆಯ ಜಗದೊಡೆಯನಲ್ಲಿ;
ಘನತಿಮಿರ ಕವಿದಿರುವ ಮನದ ಸಾಮ್ರಾಜ್ಯದಲಿ
ಹೆಮ್ಮೆಯಲಿ ತೊಳಲುತಿರೆ ಜನ್ಮಾಂಧರಂದದಲಿ;
ತಮಗಾಗಿ, ತಾವೊಲಿದವರಿಗಾಗಿ ಮನಮರುಗಿ
ಪ್ರಾರ್ಥನೆಯ ಮಾಡದಿರೆ ಕಂಬನಿಯ ತಾಳಿ—
ಮನುಜರೆಂದರೆ ಏನು? ಒರಿಮೃಗಗಳಂತೆ!
ಹೋಗಿ ಬರುವೆನು ನಿಲ್ಲು. ಬಹುದೂರ ಹೋಗುವೆನು
ನೀನೋಡುವಿವರೊಡನೆ—ಹೋಗುವೆನೊ ನಾನರಿಯೆ—
(ಸಂಶಯದ ಮಂಜು ಕವಿದಿಹುದೆನ್ನ ಮನದಲ್ಲಿ)
ತೆರಳುವೆನು ಸಮರದಲಿ ಮಡಿದವರ ಸಗ್ಗಕ್ಕೆ:
ಚಳಿಗಾಳಿಯಲ್ಲಿಲ್ಲ; ಮಳೆಯಿಲ್ಲ; ಮಂಜಿಲ್ಲ;
ಬಿರುಗಾಳಿಯಲ್ಲಿಲ್ಲ; ದುಃಖವೆನ್ನುವುದಿಲ್ಲ;
ಸುಗ್ಗಿಯಲಿ ತಳಿತು ನಳನಳಿಪ ಬನದೆದೆಯಲ್ಲಿ,
ಬಗ್ಗಿಸುವ ಕೋಗಿಲೆಯ ನುಣ್ಚರದ ದನಿಯಲ್ಲಿ,
ಸೊಬಗಿಂದ ಪೂತೆಸೆವ ಬಳ್ಳಿಮಾಡಂಗಳಲಿ,
ಸೊಗದಲ್ಲಿ, ಸೊಬಗಿನಲಿ, ಸನ್ನಿಯಲಿ, ಶಾಂತಿಯಲಿ
ಮೆರೆವ ನಾಡಿಗೆ ತೆರಳಿ ಗಾಯಗಳ ಮಾಣಿಸುವೆ!
ಹೋಗಿ ಬರುವೆನು ನಿಲ್ಲು; ವೀರ, ರಣವೀರ;
ಮರುಗದಿರು; ಶಾಂತಿಯನು ಹೊಂದು ಹೇ ಧೀರ!"

ದೊರೆಯಿಂತು ನುಡಿಯುತಿರೆ ಮೆಲುಮೆಲನೆ ದೇವನೌಕೆಯು ಸರಿದು ತೇಲಿ,
ಗರಿಗೆದರಿ ಮೈಕೊಡವಿ ಮಡಿವ ಮೊದಲೊಂದುಸಲ ಹೆಮ್ಮೆಯಲಿ ಕೂಗಿ,
ಎದೆಯ ಮುಂದಕೆ ಚಾಚಿ, ತೆರೆಯ ಮೇಲೀಜುತಿಹ ಹಂಸವನು ಹೋಲಿ
ದೂರ ಸಾಗಿತು ಜವದಿ, ನೋಡುತಿರೆ ಬರಬರುತ ಕಿರಿದು ಕಿರಿದಾಗಿ!
ಹಳೆಯ ಬಾಳನು ನೆನೆದು, ನಿಂತಿರಲು ರಣವೀರನಳಲಿಗೀಡಾಗಿ
ಮುಳಿಗಿದುದು ರೋದನವು ತೆರೆಯ ಮೊರೆಯಾಟದಲಿ, ನೌಕೆ ಮರೆಯಾಗಿ!

---

## ತಾ ನಾ ಜಿ

ಸದ್ದಿಲಿಗತ್ತಲು, ಕತ್ತಲದೆತ್ತಲು !
ಸಿಂಹಗಡದಾಕೋಟೆಯ ಸುತ್ತಲು
ಕೃಷ್ಣಪಕ್ಷದ ಕತ್ತಲು !—ಕಗ್ಗತ್ತಲು !
ಚಳಿಗಾಲದ ಚಳಿ ಕೊರೆಯುತಲಿತ್ತು,
ಕುಳಿರ‍್ಗಾಳಿಯು ಸುಯ್ಯನೆ ಬೀಸಿತ್ತು;
ಮುದುಗಿಪ ಮಾಗಿಯ ಚಳಿಯಲಿ ಕಪ್ಪು
ಹೆಪ್ಪುಗಟ್ಟಿತ್ತು !—ಹೆಪ್ಪುಗಟ್ಟಿತ್ತು !
ನಿದ್ರಿತ ಭೂಮಿಯ ಮನದಲಿ ದುರ್ಗವು
ಸ್ವಪ್ನವಾಗಿತ್ತು !—ಸ್ವಪ್ನವಾಗಿತ್ತು !
ಘನತಿಮಿರಾವೃತ ನಿಶ್ಚಲ ನಭದಲಿ
ತಾರೆಗಳೆಸೆದವು ಮೌನದಲಿ ;
ಸದ್ದೊಂದಾದರು ಹೊರಮಡಲಿಲ್ಲ
ದುರ್ಗವು ಕೇಸರಿದುರ್ಗದಲಿ !
ಸುತ್ತಲರಣ್ಯವು ಘೂರ್ಮಿಸುತಿತ್ತು,
ಕೋಟೆಯು ಬೆಟ್ಟದ ನೆತ್ತಿಯೊಳಿತ್ತು,
ಹತ್ತಲು ಹಾದಿಯು ಕಡಿದಾಗಿತ್ತು,
ಹತ್ತಲೆಳಸಿದರೆ ಬರುವುದು ಮಿತ್ತು !
ದುರ್ಗದ ರಕ್ಷಣೆಗರ್ಪಿತ ಪ್ರಾಣರು,
ವಿಕ್ರಮ ಕ್ಷತ್ರಿಯ ವಜ್ರತ್ರಾಣರು
ಸಾವಿರದಿನ್ನೂರಾಳುಗಳು
ಇದ್ದರಲ್ಲಿ ಕಟ್ಬಾಳುಗಳು !
ಉದಯಭಾನು ನಿರುಪಮ ರಣದಲ್ಲಿ ;
ಉದಯಭಾನು ದಳವಾಯಿಯು ಅಲ್ಲಿ !
ಕ್ಷತ್ರಿಯ ಪೌರುಷಕುತ್ತಮ ತವನಿಧಿ !
ದಿಲ್ಲೀಶ್ವರನಿಗೆ ಅವನೇ ಪ್ರತಿನಿಧಿ !

ಭೀಮ ಪರಾಕ್ರಮಿಯಾತನ ವಶದಲಿ,
ದುರ್ಗವಿದ್ದುದು ಗರ್ವದಲಿ,
ಕೃಷ್ಣಪಕ್ಷದ ಪರ್ವದಲಿ!

ಯಾರವರಲ್ಲಿ? ಕಗ್ಗತ್ತಲಲಿ!
ಸಿಂಹಗಡದಾ ಹೊರವಳಯದಲಿ!
ನೀರಿನೊಳಲೆಯುವ ಮೀನುಗಳಂತೆ,
ಬಾನಿನೊಳಲೆಯುವ ಮೋಡಗಳಂತೆ,
ಮಸಣದೊಳಲೆಯುವ ಮರುಳ್ಗಳಂತೆ,
ಸಾವಿನದೂತರ ಸೆರಳ್ಗಳಂತೆ
ತಗ್ಗು ದಿಣ್ಣೆಗಳ ನಾಡಿನಲಿ,
ಎದ್ದ ಕುರುಚಲು ಕಾಡಿನಲಿ,
ಕದ್ದು ಮೆಲ್ಲನೆ ಬರುತಿಹರು!—ನುಗ್ಗಿಬರುತಿಹರು!
ಯಾರವರಲ್ಲಿ? ಕಗ್ಗತ್ತಲಲಿ!
ಸಿಂಹಗಡದಾ ಹೊರವಳಯದಲಿ!
ಕೃಷ್ಣಪಕ್ಷದ ನವಮಿಯ ರಾತ್ರಿ,
ಮಾಘಮಾಸದ ನಡುರಾತ್ರಿ,—ನಟ್ಟನಡುರಾತ್ರಿ!
ಐನೂರಾಳ್ಗಳು, ಮಾವಳಿಯಾಳ್ಗಳು,
ತಾನಾಜಿಯ ಕಟ್ಟಾಳುಗಳು!
ಐನೂರಾಳ್ಗಳು, ಮುಸೆದಿಹ ಬಾಳ್ಗಳು,
ಶಿವರಾಯನ ವೀರಾಳುಗಳು!
ತಾನಾಜಿಯ ಸೇನಾಧಿಪತನದಲಿ,
ಸೂರ್ಯಾಜಿಯ ಉಪದಳಪತಿತನದಲಿ,
ದುರ್ಗಮ ಕೇಸರಿದುರ್ಗವ ಜಯಿಸಲು
ಮೌನದಿ ಬಂದರು ರಾತ್ರಿಯಲಿ!—ಮಧ್ಯರಾತ್ರಿಯಲಿ!
ಪಿಸು ಮಾತೊಂದನು ನುಡಿಯಲೆ ಇಲ್ಲ.
ಕೈದುಗಳೊಂದರ ಖಣೆ ಖಣೆ ಇಲ್ಲ;
ಐನೂರಾಳ್ಗಳು ಒಬ್ಬನೊಲು,

ಹಿಂಬಾಲಿಸಿದರು ವೀರನನು!
ರಾಯನ ಬಲಗೈಬೀರನನು!
ಕಾಲಾಂತಕ ರಣಧೀರನನು!
ರಣವಿಕ್ರಮ ತಾನಾಜಿಯನು!
ಕಗ್ಗತ್ತಲು! ಕಗ್ಗತ್ತಲು ಸುತ್ತಲು!
ನೋಡಿದರೇನಿದೆ? ಕುರುಡಿಹುದೆತ್ತಲು!
ಮುಗ್ಗರಿಸಿದರೂ ಧೃತಿಗೆಡಲಿಲ್ಲ,
ನಡನಡುಗಿದರೂ ಎದೆಗೆಡಲಿಲ್ಲ;
ಭಟನೊಬ್ಬನು ಹುಬ್ಬಿಕ್ಕಲೆ ಇಲ್ಲ,
ತಾನಾಜಿಯ ಬಳಿಯಲಿ ಭಯವಿಲ್ಲ!
ಬಂಡೆ ಬಂಡೆಯಲಿ, ಹೊದರು ಹೊದರಿನಲಿ,
ನುಗ್ಗಿ ಬೆಟ್ಟವನೇರಿದರು!
ದುರ್ಗದ ಬುಡವನು ಸೇರಿದರು.
ಭಿತ್ತಿಯು ದುರ್ಗಮವಾಗಿತ್ತು,
ಚಳಿಯಲಿ ಹಿಮಗಿರಿಯಾಗಿತ್ತು!—ತಣ್ಣಗಾಗಿತ್ತು.

ಸದ್ದಿಲಿಗತ್ತಲು, ಕತ್ತಲದೆತ್ತಲು!
ಸಿಂಹಗಡದಾ ಕೋಟೆಯ ಸುತ್ತಲು
ಕೃಷ್ಣಪಕ್ಷದ ಕತ್ತಲು!—ಕಗ್ಗತ್ತಲು!
ನೂಲೇಣಿಯ ಕರದೊಳು ಹಿಡಿದೊಡನೆಯೆ
ತಾನಾಜಿಯು ಕೋಟೆಯನೇರಿದನು.
ಕಡಿದಾಗಿದ್ದುದು ಕೋಟೆಯ ಪೌಳಿಯು,
ಆದರು ಧೈರ್ಯದೊಳಡರಿದನು!
ತಾನಾಜಿಯು ಮೇಲಡರಿದನು!
ಏರುತಲೇರುತ, ಮೇಲ್ ಮೇಲೇರುತ
ಕಣ್ಮರೆಯಾದನು ಕತ್ತಲಲಿ!
ಮೂಡಿದನಾಳ್ಗಳ ಚಿತ್ತದಲಿ!

ಸೇನಾನಿಯ ಸಾಹಸವನು ನೆನೆದು
ಮಾವಳಿಯಾಳ್ಗಳು ಹಿಗ್ಗಿದರು !—ಹಿಗ್ಗಿದರು !
"ಎಂದಿಗೆ ಪೌಳಿಯ ಹತ್ತುವೆವು?
ಎಂದಿಗೆ ದುರ್ಗವ ಮುತ್ತುವೆವು?
ಎಂದಿಗೆ ವಿಜಯ ಸುವಾರ್ತೆಯನು
ಶಿವರಾಯಗೆ ಕೊಂಡೊಯ್ಯುವೆವು?"
ಎಂದಾ ಕೆಚ್ಚಿನ ಮಾವಳಿ ವೀರರು,
ಪಶ್ಚಿಮ ಘಟ್ಟದ ಅರಣ್ಯ ಶೂರರು
ಕುದಿದರು ಮನದಲ್ಲಿ !—ಕುದಿದರು ತನುವಿನಲಿ !
ನೆನೆದರು ತಾನಾಜಿಯ ಪ್ರೀತಿಯನು,
ನೆನೆದರು ಶಿವರಾಯನ ಕಾಂಕ್ಷೆಯನು,
ನೆನೆದರು ತಮ್ಮಾ ಕೀರ್ತಿಯನು—ಆ-
ರಾಧಿಸಿದರು ಜಯಮೂರ್ತಿಯನು !
ಮಾವಳಿಯಾಳ್ಗಳು ಕೆಳಗಡೆ ಇಂತಿರೆ,
ವಿಜಯ ವನಿತೆಯನು ಭಾವಿಸಿ ನಿಂತಿರೆ,
ಕರಲಾಘವದಿಂ, ಪದಲಾಘವದಿಂ,
ತಾನಾಜಿಯು ಮೇಲೇರಿದನು ;
ಪೌಳಿಯ ತುದಿಯನು ಸೇರಿದನು !
ದುರ್ಗದ ಭಿತ್ತಿಯ ಶಿಖರವ ಮುಟ್ಟಿ,
ನೂಲೇಣಿಯ ಬೇಗನೆ ಬಿಗಿಕಟ್ಟಿ
ಕಗ್ಗತ್ತಲ ಕಡೆ ನೋಡಿದನು !—ಸುಮ್ಮನೆ ನೋಡಿದನು.

ಪೂರ್ವಾಕಾಶದ ನೀಲದಿಗಂತದಿ,
ಕತ್ತಲ್ಗಡಲಿನ ದೂರಪ್ರಾಂತದಿ,
ಇರುಳ್ಬೆಣ್ ನೆನೆಯುವ ಬೆಳಕಿನ ನೆನಸೋ?
ಕದ್ದಿಂಗಳು ಕಾಣುವ ಬೆಳ್ಗನಸೊ?
ಎಂಬಂದದಿ ಕಾಂತಿಯು ಮೈದೋರಿ,
ಒಯ್ಯನೆ ಹೊಂಬಣ್ಣವು ಹೊಗರೇರಿ,

ಜೊನ್ನರೆದುಂಬಿದ ಹೊಂಗೊಡದಂದದಿ,
ಕತ್ತಲೆಗೊದಗಿದ ಹಣೆಗಣ್ಣಂದದಿ,
ಕೊಂಕಿದ ಕುಂಕುಮದರೆ ಬಟ್ಟಂದದಿ,
ಕೃಷ್ಣಪಕ್ಷದ ನವಮಿಯ ಚಂದ್ರನು
ಮಂದರುಚಿಯಲಿ ಬಂದನು!—ಮೆಲ್ಲನೈತಂದನು!
ತೊಲಗಿದುದೊಯ್ಯನೆ ಕತ್ತಲುಬೀಡು,
ಕಪ್ಪಿನ ಬಸಿರಿಂದುಣ್ಮಿತು ನಾಡು;
ಬೆಟ್ಟದ ಮೇಲ್ ಬೆಳ್ದಿಂಗಳು ಹಬ್ಬಿತು
ಸಿಂಹಗಡವನು ತಬ್ಬಿತು!—
ಸಿಂಹಗಡವನು ತಬ್ಬಿತು,
ಮಾವಳಿಗಳ ಬಾಳುಬ್ಬಿತು!
ಶೈಶಿರಕಾಲದ ಚಳಿ ಕೊರೆದಿತ್ತು,
ಮಂದ ಸಮೀರಣ ಬೀಸಿತ್ತು.
ದುರ್ಗದಲೆಲ್ಲೆಡೆ ನೀರವವಿತ್ತು;—ಶಾಂತಿ ಹಬ್ಬಿತ್ತು!
ಎತ್ತನೋಡಿದರೆಲ್ಲ ಜಗತ್ತು
ನಿದ್ರಾಮುದ್ರಿತವಾಗಿತ್ತು!
ಪೌಳಿಯ ಬುಡದಲಿ ನಿಂತಾಸೇನೆಯು
ನೋಡಿತು ಮೇಗಡೆ ತಲೆಯೆತ್ತಿ;
ಭಿತ್ತಿಯ ನೆತ್ತಿಯೊಳಿದ್ದಾ ವೀರನು
ಸನ್ನೆಯ ಕೊಟ್ಟನು ಕೈಯೆತ್ತಿ:
ಗೋಡೆಯ ತುದಿಯಲಿ ನಿಂತಾ ಮೂರ್ತಿಯು,
ಚಿತ್ತರವಾದಾ ಬಾನಿನ ಪಟದಲಿ
ಕೆತ್ತಿ ಮೆತ್ತಿದ ಪುತ್ತಳಿಯಂದದಿ,
ನೋಟಕೆ ಚಿತ್ತರವಾಗಿತ್ತು!—ಧೀರವಾಗಿತ್ತು!
ಮೂರ್ತಿಯ ಕಂಡಾ ಮಾವಳಿಯಾಳ್ಗಳು
ಗಗನದೊಳವರಿಗೆ ಮೈದೋರಿದನೋ
ವೀರರ ದೇವನೆ ಎಂಬಂದದಲಿ,

ಕೈಮುಗಿದವನಿಗೆ ಬಾಗಿದರು !
ವೀರಪೂಜೆಯ ಮಾಡಿದರು !
ತಡಮಾಡದೆ ದನಿಗೈಯದೆ ಒಡನೆಯೆ
ನೂಲೇಣಿಯ ಕಡೆ ಸಾಗಿದರು,
ಮುನ್ನೂರಾಳ್ಗಳು ಸಾಗಿದರು !
ಇನ್ನೂರಾಳ್ಗಳು ಸೂರ್ಯಾಜಿಯ ಜೊತೆ
ಸಮಯಕ್ಕೊದಗಲು ಹಿಂದೆಯೆ ನಿಂತರು
ದುರ್ಗದ ಭಿತ್ತಿಯ ಮೂಲದಲಿ.
ಬೇಗಬೇಗನೆ ಹತ್ತಿದರೆಲ್ಲರು,
ಸಹ್ಯಗಿರಿಗಳ ಗರಡಿಯ ಮಲ್ಲರು ;
ಇಂತು ಲಗ್ಗೆಯ ಹತ್ತುವ ಜವದಲಿ
ಕೈದುಗಳೊಲೆಯುವ ಖಣಿಖಿಣಿರವದಲಿ
ಇರುಳ ಮೌನವು ಬೆಚ್ಚಿತು !—ಸದ್ದು ಹೆಚ್ಚಿತು !

ಇರುಳ ಮೌನವು ಬೆಚ್ಚಿತು !—ಸದ್ದು ಹೆಚ್ಚಿತು !
ಜೋಂಪಿಸುತಿದ್ದಾ ಕಾವಲುಗಾರನ
ಕಿವಿಯ ತೆರೆಯಿಸು ಚುಚ್ಚಿತು !—ಸದ್ದು ಹೆಚ್ಚಿತು !
ಪಹರಿಯು ಕಣ್ದೆರೆದೊಡನೆಯೆ ಮುಂದಕೆ
ಬೇಗನೆ ಶಂಕಿಸಿ ಸಾಗಿದನು ;
ತಾನಾಜಿಯು ಬಿಟ್ಟಂಬಿನ ಪೆಟ್ಟಿಗೆ
ಬಿದ್ದನು ಜೀವವ ನೀಗಿದನು !
ಧೊಪ್ಪನೆ ಬಿದ್ದಾ ಪಹರಿಯ ಕಟಿಯಲಿ
ಖಡ್ಗಪಿಧಾನವು ಚೀರಿದುದು !
ಸದ್ದಿಲಿಯಿರುಳೂ ಚೀರಿದುದು !
ಸದ್ದನು ಕೇಳಿದ ಪಹರಿಗಳೆಲ್ಲರು
ಒಬ್ಬೊಬ್ಬರೆ ಬಂದರು ಆಯೆಡೆಗೆ ;
ಸೇನಾನಿಯು ಎಚ್ಚಲಗುಗಳೂಟಕೆ
ತುತ್ತಾದರು ಎಲ್ಲರು ಕಡೆಕಡೆಗೆ !

ಮಾವಳಿಗಳು ಮೇಲೇರಿದರು,
ಕೋಟೆಯ ನೆತ್ತಿಯ ಸೇರಿದರು.
ದುರ್ಗದ ಹಲ್ಲಾ ಹತ್ತಿದರು
ಸಿಂಹಗಡವನು ಮುತ್ತಿದರು!
ನಿದ್ದೆಯೊಳದ್ದಿದ ಕ್ಷತ್ರಿಯ ವೀರರ
ಎದೆಯಲಿ ಭೀತಿಯ ಬಿತ್ತಿದರು!
ಮಲಗಿದ ವೀರರು ತೆಕ್ಕನೆ ಎದ್ದು
ಅಸ್ತ್ರಶಸ್ತ್ರಗಳ ಕೈದುಡುಕಿ,
ಹಿಂದು ಮುಂದನು ನೋಡದೆ ನಡೆದರು
ಸದ್ದು ಬರುವಾಕಡೆ ಹುಡುಕಿ!
ಹಿಂದಕೆ ಮುಂದಕೆ ತಿರುಗುವ ಸದ್ದು,
ಮೊದಲಲಿ ತುಂಬಿತು ಹೆಜ್ಜೆಯ ಸದ್ದು;
ಒಡನೆಯೆ ಪಹರಿಗಳೆಲ್ಲರು ಬಿದ್ದು,
ಖಣಿ ಖಣಿ ಎಂದುದು ಒರೆಗಳ ಸದ್ದು;
ಕೂಡಲೆ ಮಾವಳಿಯಾಳ್ಗಳ ಸದ್ದು
ಕೇಳಿಸಿತೆಲ್ಲೆಡೆ ರೌಕುಳವೆದ್ದು;
ಅನ್ನೆಗಮಲ್ಲಿಗೆ ರಕ್ಷಕರೆದ್ದು
ನುಗ್ಗುತ ಬಂದರು! ಹೆಚ್ಚಿತು ಸದ್ದು!
ಮಾವಳಿಯಾಳ್ಗಳ ನುಗ್ಗಿನಲಿ
ಕಳಕಳವಾದುದು ದುರ್ಗದಲಿ!—ಸಿಂಹದುರ್ಗದಲಿ!

ಮಿತ್ರರದಾರು? ಶತ್ರುಗಳಾರು?
ಸತ್ತವರಾರು? ಕೊಲ್ಲುವರಾರು?
ಎಂಬುದನರಿಯದೆ ರಕ್ಷಕರಾಗ
ಪಂಜುಗಳನು ಹೊತ್ತಿಸಿದರು ಬೇಗ;
ಕೂಡಲೆ ಕಾಂತಿಯು ಹೆಚ್ಚಿದುದು
ಕೋಲಾಹಲವೂ ಹೆಚ್ಚಿದುದು!

ಮಾವಳಿಯಾಳ್ಗಳು ಮುತ್ತಿದರು
ರಿಪುಮೋಹರವನು ಕುತ್ತಿದರು!
ಕ್ಷತ್ರಿಯ ವೀರರ ಪೆರ್ಬಡೆಯಲ್ಲಿ
ಕೆಲವರು ಬಿದ್ದರು, ಕೆಲವರು ಸತ್ತರು,
ಹಲವರು ಮುಂದಕೆ ನುಗ್ಗಿದರು;
ಜಯ! ಜಯ! ಎನ್ನುತ ಝಳಪಿಸಿ ಖಡ್ಗವ
ಮಾವಳಿಯಾಳ್ಗಳ ಮುಗ್ಗಿದರು!
ಸಂಘಟ್ಟಣೆಯಲಿ ಹೆಚ್ಚಿತು ಹೊಯ್ಲು,
ನೂರ್ಮಡಿಯಾಯಿತು ಕದನದ ಹುಯ್ಲು!
ತಾನಾಜಿಯು ಕಾಲಾಂತಕನಂದದಿ
ಮುಂಬರಿದನು ಕರಖಡ್ಗದಲಿ;
ರಜಪೂತರು ನಿಲಲಾರದೆ ಹಿಂದಕೆ
ಸರಿದರು ಕುಗ್ಗುತಲೊಗ್ಗಿನಲಿ.
ಹಿಂದಕೆ ಮುಂದಕೆ ಯೋಧರು ನುಗ್ಗಿದ-
ರಿರಿದರು ಹಾಯ್ದರು ಯುಕ್ತಿಯಲಿ!—ಭೀಮಶಕ್ತಿಯಲಿ!
ಪ್ರಳಯ ಭಯಂಕರವಾದುದು ಧೀರರ
ಘೋರಕಠಾರಿಯ ತಾಡನವು!—ಚಂಡತಾಡನವು!
ತಾನಾಜಿಯೆ ರಣರಂಗದ ಜೀವವು.
ಧೈರ್ಯವು ಬಲವಾವೇಶಗಳು;
ತಾನಾಜಿಯೆ ಮಾವಳಿಗಳ ಹೃದಯವು
ಸಂತಸಮುಲ್ಲಸ ಕೀರ್ತಿಗಳು!
"ಕಾದಿರಿ ವೀರರೆ! ರಾಜಶಿವಾಜಿಯ
ನಚ್ಚಿನ ಮೆಚ್ಚಿನ ಪಟುಭಟರೇ!
ನೆಚ್ಚಿದೆ ನಿಮ್ಮೊಳು, ಕೆಚ್ಚಿದೆ ನಿಮ್ಮೊಳು,
ಸೆರೆಹಿಡಿಯಿರಿ ಜಯಲಕ್ಷ್ಮಿಯನು!
ಸತ್ತರೆ ಸಗ್ಗವು! ಎಂತೂ ಕೀರ್ತಿಯು!
ಬದುಕಲು ರಾಜನ ಮನ್ನಣೆಯು!

ನುಗ್ಗಿ ಮುಂದಕೆ ರಿಪುಗಳನಿರಿಯಿರಿ!
ನೆನೆಯಿರಿ ತಾಂಡವ ಮೂರ್ತಿಯನು!
ನೆನೆಯಿರಿ ಮಾತೆ ಭವಾನಿಯನು!"
ಇಂತು ದನಿಗೈದನು ತಾನಾಜಿಯು
ಮುಂದರಿದಸಿಯನು ಝಳಪಿಸುತ!
ಸಾಯುವರೊರಲಿದರುಳಿದವರಳಿದರು,
ಖಣಿಖಿಟಿಲೆಂದುವು ಕೈದುಗಳು!
ಕಳದಲಿ ರಕ್ತದ ಕೆಸರಾಯ್ತು!
ಕೃಷ್ಣಪಕ್ಷದ ನವಮಿಯ ಚಂದ್ರನು
ಮೇಲೆಸೆದನು ಆಕಾಶದಲಿ;—ಮಂದ ಪ್ರಕಾಶದಲಿ!
ಮಾಘಮಾಸದ ಚಳಿ ಕೊರೆದಿತ್ತು,
ಮಂದ ಸಮೀರಣ ಬೀಸಿತ್ತು;—ಇಬ್ಬನಿ ಸೂಸಿತ್ತು!

ಕೆಳಗಡೆ ನಿಂತಾ ಸೈನಿಕರೆಲ್ಲರು
ಕೋಲಾಹಲವನು ಕೇಳಿದರು,
ವೀರಾವೇಶವ ತಾಳಿದರು!
ಸಮರ ಧ್ವನಿಯನು ಕೇಳುತ ಕೇಳುತ
ಕುದಿದನು ಮನದಲಿ ಸೂರ್ಯಾಜಿ!
ಅಣ್ಣನಲ್ಲವೆ ತಾನಾಜಿ?
ಗೋಡೆಯನೇರಲು, ಕೋಟೆಯ ಸೇರಲು,
ಕದನವ ನೋಡಲು, ಕಲಿಗಳ ಕೂಡಲು,
ನೆರವನು ನೀಡಲು ಸೋದರಗೆ,
ಪೆಟ್ರೋಲೆಡೆಯಿಹ ಬೆಂಕಿಯ ತೆರದಲಿ,
ಕರವಾಲವ ತುಡುತುಡುಕುತ ಕರದಲಿ
ಕುದಿದನು ಮನದಲಿ ಸೂರ್ಯಾಜಿ!
ಅಣ್ಣನಲ್ಲವೆ ತಾನಾಜಿ?
"ನೂಲೇಣಿಯನೇರಿರಿ, ಓ ವೀರರೆ,
ಬನ್ನಿರಿ ಕಾಳೆಗದೌತಣಕೆ

ಬನ್ನಿರಿ ಕಲಿಗಳ ಬಲಿರಣಕೆ''
ಎನ್ನುತ ಏಣಿಯನೇರಿದನು.—ಹಾದಿದೋರಿದನು.
ಯೋಧರು ಮುಂದರಿದೇಣಿಯನಡರುತ
ಜಯ ಹಾಕಾರವ ಮಾಡಿದರು!
ಧಾವಿಸಿ ಹತ್ತಿ ಓಡಿದರು ;—ರಣವನು ನೋಡಿದರು!

ಎಲ್ಲಿ ವೈರಿನವಿರೇಳುವುದಲ್ಲಿ,
ಎಲ್ಲಿ ಖಡ್ಗದ ಖಣಿಖಣಿಲಲ್ಲಿ,
ಎಲ್ಲಿ ವೀರರ ಮುಂಡಗಳಲ್ಲಿ,
ಎಲ್ಲಿ ರಕ್ತದ ರಣಧುನಿಯಲ್ಲಿ—ಅಲ್ಲಿ ತಾನಾಜಿ!
ಎಲ್ಲರ ಮುಂದೆಯು ತಾನಾಜಿ!
ಕದನದಲೆಲ್ಲಿಯು ತಾನಾಜಿ!
ವೀರಪುಂಗವ ತಾನಾಜಿ:—ಕಲ್ಕಿ ತಾನಾಜಿ!
ಮಿಂಚುವ ಕತ್ತಿಗಳೆಲ್ಲವು ಅವನವೆ,
ಚಿಮ್ಮುವ ಬಾಣಗಳೆಲ್ಲವು ಅವನವೆ,
ಹೊಳೆಯುವ ಡಾಲುಗಳೆಲ್ಲವು ಅವನವೆ ;
ಅವನೊಬ್ಬನೆ ರಣಧಾಮದಲಿ
ನೂರಾದನು ಸಂಗ್ರಾಮದಲಿ!—ಉಗ್ರಭೂಮಿಯಲಿ!
ನುಗ್ಗುತ, ಕೊಲ್ಲುತ, ತಿವಿಯುತಲಿರಿಯುತ,
ತಂಡ ತಂಡಗಳ ತುಂಡರಿಸಿ,
ಕಾಲಾಂತಕನೊಲು ಸಂಹರಿಸಿ,
ಮುಂದಕೆ, ಮುಂದಕೆ, ಇನ್ನೂ ಮುಂದಕೆ
ಹಾಯ್ದನು ತಾನಾಜಿಯು ತಾನು.
ಚಂಡ ವಿಕ್ರಮಿ, ಗಂಡು ಪರಾಕ್ರಮಿ,
ಬಂದನು ಮುಂದೆ ಉದಯಭಾನು!
ನೋಡಿರಿ! ನೋಡಿರಿ! ತೊಡಗಿದರಿಬ್ಬರು
ಭೀಷಣ ಖಡ್ಗಾಖಡ್ಗಿಯಲಿ!
ರಣಧೌತಾಸಿಗಳಿಬ್ಬರು ವೀರರು!

ಸಮರೋನ್ಮತ್ತರು ಇಬ್ಬರು ಶೂರರು!
ಸಮಬಲ ಪಟುಭಟರಿಬ್ಬರು ಕಲಿಗಳು!
ನೆತ್ತರು ಹೀರುವ ಹಸಿದಿಹ ಹುಲಿಗಳು,
ಮಿಂಚಿಸಂಚಿಸ ಮೇಣ್ ಸಿಡಿಲೊಡಲಿನ
ಕಾರ್ಗಾಲದ ಜೀಮೂತಗಳಂದದಿ
ಒಬ್ಬರನೊಬ್ಬರು ನೋಡುತ್ತ,
ದೃಷ್ಟಿಯುದ್ಧವ ಮಾಡುತ್ತ,
ನಿಂತರು ಬಿಂಕದಲಿ!—ರಕ್ತಪಂಕದಲಿ!
ನೋಡಿರಿ! ನೋಡಿರಿ! ವೀರರ ಕದನವ!
ನೋಡಿರಿ ಮಿಂಚುವ ಖಡ್ಗಗಳ!
ಕೇಳಿರಿ! ಕೇಳಿರಿ! ಖಣಿಖಿಣಿನಾದವ!
ಗುಡುಗುವ, ಸಿಡಿಲುವ ಡಾಲುಗಳ!
ಇಬ್ಬರು ತಿವಿದರು! ತಿವಿದು ಗುರಾಣಿಯು,
ವೈರಿಯ ತಿವಿತಕ್ಕೊಡ್ಡಿದರು!
ಖಂಡೆಯುಗಳ ಸಂಘಟ್ಟಣೆಯಲ್ಲಿ,
ಡಾಲುಗಳುರ್ಚುವ ಘಣರವದಲ್ಲಿ!
ಬಂಡೆಯು ಬಂಡೆಗೆ ಬಡಿದಂದದಲಿ,
ಸಿಡಿಲಿಗೆ ಸಿಡಿಲೇ ಹೊಡೆದಂದದಲಿ
ಸದ್ದಿರಿಯಿತು ದಿಙ್ಮಂಡಲವ! ಬಿರಿಯಿತು ಭೂಮಂಡಲವ!
ಇಬ್ಬರು ಬಿದ್ದರು, ಇಬ್ಬರು ಎದ್ದರು,
ಇಬ್ಬರು ತಿವಿದರು, ಇಬ್ಬರು ನೆಗೆದರು,
ಇಬ್ಬರು ರಕ್ತವ ಚೆಲ್ಲಿದರು.
ಸಮಗೈಯಾದರು ಬಲ್ಲಿದರು!—ಕಂಡರೆಲ್ಲವರು.
ಓಹೋ ಬಿದ್ದರು! ಓಹೋ ಗೆದ್ದರು!
ಬಿದ್ದವನಾವನೊ? ಗೆದ್ದವನಾವನೊ?
ಬಿದ್ದವನೊಮ್ಮೆ! ಎದ್ದವನೊಮ್ಮೆ!
ಕತ್ತಿಯದೊಮ್ಮೆ! ಗುರಾಣಿಯೊಮ್ಮೆ!

ಮಿಂಚಿದರಿಬ್ಬರು ಕಣ್ಣಾಳಿಗೆ,
ಭೀಷಣ ಖಡ್ಗಾಖಡ್ಗಿಯಲಿ,
ಭೈರವ ಢಖ್ಖಾಢಿಖ್ಖಿಯಲಿ!
ಮಿಂಚು ಮಿಂಚನು ಸೆಣಸುವ ತೆರದಿ,
ಸಿಡಿಲು ಸಿಡಿಲನು ಸೆಣಸುವ ತೆರದಿ,
ಆನೆಯಾನೆಯ ಕೆಣಕುವ ತೆರದಿ,
ಸಿಂಹ ಸಿಂಹವ ಕೆಣಕುವ ತೆರದಿ,
ಕಾದಿದರಾವೀರಾಳುಗಳು!—ಕಟ್ಟಾಳುಗಳು!
ರಣನಿಂತುದು ಅವರಿಬ್ಬರೊಳೆ!
ಜಯ ನಿಂತುದು ಅವರೊಬ್ಬರೊಳೆ!
ಓಹೋ ನೋಡಿರಿ! ಅಯ್ಯೋ ನೋಡಿರಿ!
ಕೇಡಾದುದೆ ಹಾ! ಓಡಿರಿ! ಓಡಿರಿ!
ಭೀಮ ಪರಾಕ್ರಮಿ ಉದಯನ ಪೆಟ್ಟಿಗೆ
ಪುಡಿಪುಡಿಯಾಯಿತು ಕೈಯಗುರಾಣಿಯು
ಕೆಟ್ಟನು ಓಹೋ ತಾನಾಜಿ!
ಇಲ್ಲಾ! ಇಲ್ಲಾ! ನೋಡಿರಿ, ನೋಡಿರಿ!
ವಜ್ರಹಸ್ತವನೊಡ್ಡಿದ ನೋಡಿರಿ!
ಅಯ್ಯೋ! ಅಯ್ಯೋ! ಮುರಿಯಿತು ಕೈ!
ನೆತ್ತರು ತುಂಬಿತು ವೀರನ ಮೈ!—ತಾನಾಜಿಯ ಮೈ
ಬೆಚ್ಚಿದನೇನು? ಬೆದರಿದನೇನು?
ಕೆಚ್ಚೆದೆಗಲಿ ಹಿಂಜರಿದನೆ ಏನು?
ಹೊಡೆದನು ಉದಯನ ಪೇರೆದೆಗೆ!
ಮುನ್ನುಡಿ ಬರೆದನು ರಿಪುವಧೆಗೆ!
ಬೀಳುತ ಉದಯನು ರೋಷಾವೇಶದಿ
ತಿವಿದನು ತಾನಾಜಿಯ ಎದೆಗೆ!
ಬಿದ್ದರು ಇಬ್ಬರು ಬುವಿಯೆದೆಗೆ!—ಸಿಂಹ ದುರ್ಗದಲಿ
ನೆತ್ತರು ಹಾರಿತು! ನೆತ್ತರು ಕಾರಿತು!

ಇಬ್ಬರ ಪ್ರಾಣವು ಮೆಯ್ಯಿಂ ಪಾರಿತು!
ವೀರರಿಬ್ಬರು ಮಡಿದರು!—ಅಲ್ಲಿ ಮಡಿದರು!
ಕೂಡಿದರಿಬ್ಬರು ಸ್ವರ್ಗದಲಿ!—ಸಿಂಹ ದುರ್ಗದಲಿ!
ಹಿಂದು ಹಿಂದಕೆ ಮಾವಳಿಯಾಳ್ಗಳು
ಸರಿದರು ಮಡಿಯಲು ತಾನಾಜಿ!
ಮುಂದು ಮುಂದಕೆ ಸುಗ್ಗಿತ ನಡೆದನು
ಕರೆದನು ಸೇನೆಯ ಸೂರ್ಯಾಜಿ!
"ವೀರ ಶಿವಾಜಿಯ ನಚ್ಚಿನ ಭಟರೇ,
ತಾನಾಜಿಯ ಮೆಚ್ಚಿನ ಪಟುಭಟರೇ,
ಎಲ್ಲಿಗೆ ಓಡುವಿರಿಲ್ಲೇ ನಿಲ್ಲಿ!
ವೀರಸ್ವರ್ಗವು ಸಮುಗಿಂದಿಲ್ಲಿ!
ಜೀಜಾಮಾತೆಯ ಔತಣವೆಲ್ಲಿ?
ರಾಜಶಿವಾಜಿಯ ಭಕ್ತಿಯದೆಲ್ಲಿ?
ತಾನಾಜಿಯ ಆ ಪೂಣ್ಕೆಯದೆಲ್ಲಿ?
ಮಾವಳಿಯಾಳ್ಗಳ ಪೌರುಷವೆಲ್ಲಿ?
ವೀರಸತಿಯುರ ಪತಿಯುರದೆಲ್ಲಿ?
ಗಂಡರೆಂಬುವ ಗಂಡಸದೆಲ್ಲಿ?
ಎಲ್ಲಿಗೆ ಓಡುವಿರಿಲ್ಲೇ ನಿಲ್ಲಿ!
ವೀರಸ್ವರ್ಗವು ಸಮುಗಿಂದಿಲ್ಲಿ!
ತಂದೆಯಂದದ ಸೇನಾಸಿಯನು
ಬಿಟ್ಟದೆಲ್ಲಿಗೆ ಓಡುವಿರಿ?
ಧೀರನ ದೇಹವ ಶತ್ರುಗಳೆಂಬಾ
ನಾಯ ಪಾಲಿಗೆ ಮಾಡುವಿರಿ?
ಛಿಃ ಸುಡು ಭಯದಿಂದೋಡುವ ಹೇಡಿಯ!
ಸ್ವಾಮಿಯನಗಲುವ ಪಾತಕಿಯ!
ಹಿಂಜರಿದುಳಿವುದೆ? ಛಿಃ ಸುಡು ಬಾಳನು.
ನೋಡಿರಿ ಖಂಡಿಪೆನೇಣಿಯನು!

ಕಾದಿ ಉಳಿಯಿರಿ! ಇಲ್ಲವೆ ಅಳಿಯಿರಿ!
ಕೀರ್ತಿಯು ಬರಲೇಕಪಕೀರ್ತಿ?''
ಇಂತು ನುಡಿಯುತಲಾ ಸೂರ್‍ಯಾಜಿಯು
ಖಂಡಿಸಿದನು ಸೂಲೇಣಿಯನು!
ಧೈರ್‍ಯವನಾಂತರು ಮಾವಳಿಯೊಳ್ಗಳು
ಕೇಳಲು ವೀರಸ ವಾಣಿಯನು!
''ಹರ ಮಹದೇವ್! ಹರ ಮಹದೇವ್!''
ಎನ್ನುತ ನುಗ್ಗಿದರುರುಬೆಯಲಿ.
ದೂರದ ಗಿರಿಕಾನನಗಳು ಮೊರೆದವು
''ಹರಹರ ಮಹದೇವ್'' ಎಂದೆನುತ.
ಸದ್ದಿಲಿಯಿರುಳೂ ಮರುದನಿಗೈದಿತು.
''ಹರಹರ ಮಹದೇವ್'' ಎಂದೆನುತ!
''ಹರ ಮಹದೇವ್! ಹರ ಮಹದೇವ್!''
ಜಯರವ ರಿಪುಗಳ ಬೆದರಿಸಿತು!
ಕಾದಿದರಾವೇಶದಿ ಮಾವಳಿಗಳು,
ರಜಪೂತರ ಬಲಕ್ಷೀಣಿಸಿತು!
ಖಡ್ಗಬಿದ್ದಿತು! ಗದ್ದಲವೆದ್ದಿತು!
ಬೆಚ್ಚಿ ವೈರಿಗಳೋಡಿದರು!
ಮಾವಳಿಗಳು ಕೈಮಾಡಿದರು!—ಕೈಮಾಡಿದರು!

''ಗುಡಿಗಳ ಸುಡಿ!'' ಎಂದನು ಸೂರ್‍ಯಾಜಿಯು!
ಬೆಂಕಿಯು ಬಾನಿಗೆ ಮುಟ್ಟಿದುದು!
ರಾಯಗಡದೊಳು ನಿಂತ ಶಿವಾಜಿಯು
ತಾನಾಜಿಯ ಜಯಸೂಚನೆ ಎನ್ನುತ
ಜ್ವಾಲೆಯ ಕಂಡನು, ಹಿಗ್ಗಿದನು!
ನೋಡುತ, ನೋಡುತ, ನೋಡುತಲಿರೆಯಿರೆ,
ಇರುಳಿಳಿದೊಯ್ಯನೆ ಬೆಳಗೇಳುತಲಿರೆ,
ಮಾಗಿಯಿಬ್ಬನಿ ಸೋನೆಯು ಸುರಿದಿರೆ—ಮಬ್ಬು ಕವಿದಿರೆ;

ದೂತರು ಬಂದರು, ದೂತರು ತಂದರು
ದಳಪತಿಯಳಿದಾ ವಾರ್ತೆಯನು!—ಕಠೋರ ವಾರ್ತೆಯನು!
ಕಣ್ಣೀರ್ಗರೆಯುದ ಶಿವರಾಯನು ತಾ
ಕಂಬನಿಗರೆದನು ಇಂತೆಂದು:
"ಸಿಂಹದುರ್ಗವು ಕೈಸೇರ್ದ್ದುದು; ಹಾ!
ಮಾಯವಾದುದೆ ಸಿಂಹವು!—ನನ್ನ ಸಿಂಹವು!"

---

## ರಕ್ತರಜನಿ

ಬೈಗುಗೆಂಪನು ಬೀರಿ ಪಡುವಣ
ಬೆಟ್ಟದುದಿಯೊಳು ಕಾದ ಕಬ್ಬಿಣ-
ದುಂಡೆಯಂದದೊಳಿಳಿವ ನೇಸರು
ತೊಳಗಿ ಬೆಳಗಿದನು.

ಸಂಜೆಗೆಂಪೊಳು ಮಿಂದು ತಣ್ಣೆಲ-
ರಾಟದಲಿ ತಲೆದೂಗಿ ನಲಿಯುವ
ನಳನಳಿಪ ಪೊಸತಳಿರನಾಂತಿಹ
ಬನವು, ಮಲಗಿಹ ಮಗುವಿನಂದದಿ,
ಯೋಗನಿದ್ರೆಯೊಳಿರುವ ಕಿತ್ತಡಿ-
ಯಂತೆ ರಾಜಿಸಿತು!

ಹಕ್ಕಿಗಳ ಸದ್ದಿಲ್ಲ; ಮಿಗಗಳು
ಸಂಚರಿಪ ರವವಿಲ್ಲ; ತರಗೆಲೆ
ಸುಳಿವ ತಂಗಾಳಿಯಲಿ ಕುಣಿಯುವ
ಸದ್ದದೊಂದೇ ಮೌನವಿಮ್ಮಡಿ-
ಯಾಗುವಂದದಿ ಸುತ್ತಿ ಚಿಮ್ಮಿತು
ಕನಸಿನಂದದಲಿ!

ಸಂಜೆವೆಣ್ಣಿನ ಮುಗುಳುನಗೆಯೋ?
ಸೊಗಯಿಸುವ ಕೆಂದುಟಿಯ ಬಣ್ಣವೊ?
ಪಶ್ಚಿಮಾಂಗನೆಯುಟ್ಟ ಚೇಲಾಂ-
ಚಲದ ರೇಶ್ಮೆಯ ಮಂಜುರಾಗವೊ?
ತಳುವಿದೆನು ತಾನೆಂಬ ಭಯದಿಂ
ತನ್ನ ನಚ್ಚಿನ ಬೈಗುವೆಣ್ಣಿಗೆ
ಕಾಣಿಕೆಯ ಕೊಡಲೆಂಬ ನಲ್ಬಗೆ-
ಯಿಂದ ದಿನಪಂ ದಿನದ ಪಯಣದೊ-
ಳಾಯ್ದು ತಂದಾ ಸುಗ್ಗಿವೂಗಳ

ಕೇಸರ ಪರಾಗವನು ಸಿಗ್ಗಿನೊ-
ಳರಿಯುದಿಹ ಕೋಮಲೆಯು ಚೆಲ್ಲಲು,
ಪಡುವಣದ ಬಾಂದಳವ ಮುಸುಗಿದ
ಕುಂಕುಮದ ಪುಡಿಯಂತೆ ಸಂಜೆಯ
ಕೆಂಪು ಚೆಲ್ಲಾಯ್ತು!

ಹಿಂಡಸಗಲಿದ ಹರಿಣನೊಂದು ವ-
ನಾಂತರದಿ ಬಾಯಾರಿ ನೀರನು
ಹುಡುಕುತಲೆಯುತಲೇರುತಿಳಿಯುತ
ಪೊದೆಯ ನುಸುಳುತ ಬರುತಲಿರ್ದುದು
ನಿಬಿಡ ವಿಪಿನದಲಿ.
ಕಿವಿಯ ನಲೆಯುತ, ತಲೆಯನೊಲೆಯುತ,
ಬಾಲವನು ಕುಣಿ ಕುಣಿಸಿ ಚಿಮ್ಮುತ,
ಸುತ್ತ ನೋಡುತ, ಮತ್ತೆ ತಿರುಗುತ,
ಕೊಂಕುಗೊರಲನು ಮಾಡಿ, ಶಂಕೆಯ
ದಿಟ್ಟಿಗಳನಟ್ಟುತ್ತ ನಾನಾ
ದೆಸಗೆ, ಕೊಂಬನು ಸುತ್ತಿ ಹೆಣೆಯುವ
ಬಳ್ಳಿಗಳನೊಯ್ಯೊಯ್ಯ ಸುಣುಚುತ,
ಸಪ್ಪುಳವನಾಲಿಸುತ, ಬೆಚ್ಚುತ,
ಗೊರಸಿಗಂಟದ ತರಗೆಲೆಯು ಕೊಡ
ಕೊಡಹಿ ಮರ್ಮರನಾದಗೈಯುತ-
ಲೊಮ್ಮೆ ನಿಲ್ಲುತಲೊಮ್ಮೆ ನೆಗೆಯುತ
ಬಂದುದಾ ಜಿಂಕೆ.
ಇಂತು ಪೊಮ್ಮರೆ ಬರಬರುತಲಿರೆ,
ತರುಗಳಂಚಿನ ಸಿರಿಯ ಮೆರೆಯುತ
ಬೆಟ್ಟ ಬಾಂದಳ ಬಸಗಳನು ಮರು-
ಜಿಂಬಿಸೆದೆಯಲಿ ನೆಳಲ ಲೋಕವ
ಪಡೆದು, ಕಾಡಿನ ಕಣ್ಣೆನಂದದಿ

ಹೊಳೆವ ತಿಳಿಗೊಳವೊಂದು ಮೆರೆದುದು
ಅನತಿದೂರದಲಿ.
ಕಮಲಗಳ ಸುಳಿವಿಲ್ಲ; ಹಂಸಗ-
ಳಾವಳಿಯ ಹೆಸರಿಲ್ಲ; ಮೊರೆಯುವ
ದುಂಬಿಗಳ ಕುಲವಿಲ್ಲ; ನಗರದ
ತರಳೆಯಂದದ ಸಿಂಗರದ ಸೊಬ-
ಗಿಲ್ಲ; ಹಳ್ಳಿಯ ಬಾಲೆಯೊಲು ತಿಳಿ-
ಗೊಳವು ಶೋಭಿಸಿತು!
ಗಾಳಿಯಲಿ ನಲಿನಲಿವ ತೆರೆಗಳು
ನೀಲಿ ಸೀರೆಯ ನಿರಿಯ ತೆರದಲಿ
ಮೋಹವನು ಬೀರಿದುವು. ದಡದಲಿ
ಪೂತ ತರುಗಳು ಪೂವಲಿಯ ಚೆ-
ಲ್ಲಿದುವು; ತರಗೆಲೆ ತೇಲಿದುವು ಕೆಳ-
ಗುದುರಿ; ಹಬ್ಬಿತು ಪಾಚಿಯಾದರು
ಕೆರೆಯು ಚೆನ್ನಾಯ್ತು!
ಹಬ್ಬಿದಾ ಬನಗತ್ತಲೆಯ ನಡು,
ವನರಮೆಯ ನಯನವನು ಹೋಲುವ
ತಿಳಿಗೊಳವ ಕಾಣುತಲೆ, ಮುಂದದಲಿ
ಕಣ್ಣು ಕಣ್ಣಿನ ಬಣ್ಣ ಬಣ್ಣದ
ಪೊಮ್ಮರೆಯು ನೆಗೆ ನೆಗೆದು ಚಿಮ್ಮುತ
ಸೇರಿ ಕೆರೆಯೆಡೆಯ;
ನಿಂತು ಮೊಳಕಾಲೂರಿ ಮೋರೆಯ
ನೀರಿಗಿಟ್ಟಿತು; ಹೊಡೆಯುವಳ್ಳೆಯು
ಜಲವನೀಂಟಿತು: ನೋಟವಕ್ಷಿಗೆ
ಚಿತ್ರಗತವಾಯ್ತು!
ಚಲಿಸುವಲೆಗಳ ಕನ್ನಡಿಯ ತೆರೆ-
ಯಲ್ಲಿ ಛಾಯಾ ಹರಿಣ ಕಂಪಿಸಿ

ಕದಡುಗನಸಿನ ಮುಗದ ತೆರದಲಿ
ರಾಜಿಸಿತು ಕಣ್ಗೆ!
ನೆಳಲನೆರಳೆಯು ಮೇಲಿನೆರಳೆಯ-
ನೊಲಿದು ಮುದ್ರಿಸುವಂತೆ ಚಿತ್ರವ-
ದೆಡ್ಡವಾಯ್ತಲ್ಲಿ!

ನೀರ್ಕುಡಿದು ಮೇಲೆದ್ದು ನಿಂತಾ
ಜಿಂಕೆ, ದೆಸೆಗಳ ನೋಡಿ, ಬೈಗನು
ಬಗೆಯುತಿರುಳಿಳಿವುದನು ಭಾವಿಸಿ,
ಬಳಿಯ ಹಕ್ಕೆಯ ನೆನೆದು ಮೆಲ್ಲನೆ
ಮುಂದಕಡಿಯಿಡುತಿರಲು ಬೆಚ್ಚಿತು!
ನಡುಗಿ ಚಿಮ್ಮಿತು! ಮೊಗದಿರುಹಿ ತಿರು
ತಿರುಗಿ, ನಾನಾ ದೆಸೆಯ ನಿಟ್ಟಿಸಿ,
ಹೃದಯದುಬ್ಬೆಗದಲ್ಲಿ ಚಂಚಲ
ದೃಷ್ಟಿಗಳ ಮಿಂಚಿಸುತ, ಶಿರವನು
ನೆಗಹಿ, ಗಾಳಿಯ ಹಿಡಿದು, ಸದ್ದನು
ಕೇಳೆ ಕಿವಿಗಳ ನಿಲಿಸಿ ನೆಟ್ಟಗೆ
ನಿಂತು ನಿಮಿರಿದುದು!
ಹಬ್ಬಿದಾ ವನಮಧ್ಯದಲಿ, ನೀ-
ರಾಕರದ ತೀರದಲಿ ನಿಂತಾ
ಹರಿಣನಾಲಿಸುತಿರಲು ಕೇಳಿತು
ಬೇಂಟೆಗಾರರ ದೂರ ದೂರದ
ಬೊಬ್ಬೆಯುಬ್ಬರವು.
ಬೇಂಟೆ ನಾಯ್ಗಳ ಕೂಗು, ಬಿಯದರ
ಸೋವುದನಿ; ಹಿಡಿ, ಕೂಡು ಕೂಡೆಂ-
ಬಾತುರದ ಕಾಕುಗಳ ಮರುದನಿ;
ಹರಿವ ಗೋಳಾಯಿಲರ ಹಯಗಳ
ಖುರಪುಟದ ಚಟುಲಗತಿ, ಹೇಷಾ

ರವವು ಹಬ್ಬಿತು ದೂರ ಮೊಳಗುವ
ಗುಡುಗಿನಂದದಲಿ.
ಬರಬರುತ ಹಿರಿದಾಗಿ ಸದ್ದಿನ
ವಾಹಿನಿಯು ವನಮೌನ ಪಾತ್ರೆಯ
ತುಂಬಿ ತುಳುಕಿದುದು ;
ಬಂಡೆಗಳು ಮರುದನಿಯ ಬೀರಿದು-
ವಡವಿಯಲ್ಲಿಹ ಗುಹೆಗಳುಲಿಯನು
ಕನ್ನಡಿಸೆ, ರಕ್ಕಸರ ತೆರದಲಿ
ಗಗನ ಚುಂಬಿತ ಗಿರಿ ಶಿಖರಗಳು
ಬೊಬ್ಬಿರಿದುವಾಗೊಬ್ಬರೊಬ್ಬರ
ಕರೆಯುವಂದದಲಿ !

ಕೇಳಿ ಕಳಕಳ ನಾದವನು ಕಳ-
ವಳದಿ ಪೊಮ್ಮರೆ ನೆಗೆವ ಹಾದಿಯ
ಬಗೆದು ಮಿಂಚುವ ಮುಸ್ನ, ಮಿಂಚಿನ
ರಯಗತಿಯನೇಳಿಸುತ ಬಂದುವು
ಬೇಂಟೆ ನಾಯಿಗಳು.
ಬನವು ಮರಿಗಳ ಹೆತ್ತಿತೋ ಎನೆ
ಕುಟಜಗಳ ಮರೆಯಿಂದ, ಸೊಂಪಿನ
ಕೇದಗೆಯ ಹೊದರಿಂದ, ಕವಿದಿಹ
ಕೆಂಜಿಗೆಯ ಪಿಣಿಲಿಂದ, ನಿಂತಿಹ
ಬಂಡೆಗಳ ಸೆರಗಿಂದ ತೆಕ್ಕನೆ
ಪೊದರು ಪೊದರಿನ ಗಬ್ಬದಿಂದೊಗೆ-
ತಂದು ಹಾರುತ ನೆಗೆದು ಬಂದುವು
ಬೇಂಟೆ ನಾಯಿಗಳು !
ನವಿರು ನಿಮಿರಿದ ದೇಹವೆತ್ತಿದ
ಬಾಲ, ತೆರೆದಿಹ ಬಾಯಿ, ಕೆರಳಿದ
ಕಂಗಳೆದ್ದಿಹ ಕಿವಿಗಳೇದುವ

ಹೊಟ್ಟೆ, ನಿಂತಿಹ ಮಿಾಸೆಯಿಳಿಯುವ
ಬೆವರ ಜೊಲ್ಲನು ಬಿಡದೆ ಸೂಸುವ
ಜೋಲ್ವ ಕೆನ್ನಾಲಗೆಯ ಕುನ್ನಿಗ-
ಳಡವಿ ಬಿತ್ತಿದ ಭೀತಿಯಂದದಿ
ಮಿಂಚಿ ಮೂಡಿದುವು.
ನೆಲವ ಮೂಸುತ, ಹೊದರು ಹೊದರನು
ಹೊಕ್ಕು, ಹೊಮ್ಮುತ ನಿಂತ ಬಂಡೆಗ-
ಳೇರುದಿಣ್ಣೆಯ ಚಿಮ್ಮಿ ನೆಗೆಯುತ,
ಜಂತುಗಳನರಸುತ್ತ ನಾನಾ
ಬಣ್ಣಬಣ್ಣದ ಜಾಯಿಲಂಗಳು
ನುಗ್ಗಿದುವು ಮುಂದೆ.

ಕಾರಮುಗಿಲಲಿ ಮಿಂಚು ಮಿಂಚುವ
ತೆರದಿ ಪೊಮ್ಮರೆ ಹಸುರು ಬನದಲಿ
ಚಿಮ್ಮಿ ಸಿಡಿಯಿತು; ನೆಲವನೊದೆಯಿತು
ಸಂಬಿ ಮಾರುತನ.
ಕಂಡು ಸಿಡಿದೋಡುವ ಕುರಂಗವ
ಕೂಗಿ ಬೆನ್ನಟ್ಟಿದುವು ನಾಯಿಗ-
ಳೆಲರನಟ್ಟುವ ಗಾಳಿಯಂದದೊ-
ಳಾತ್ಮನನು ಹಿಂಬಾಲಿಸುವ ಕ-
ರ್ಮಗಳ ಕುಲದಂತೆ!
ಬನದ ಮೌನವು ಬೆದರಿ ಚೀರಿತು!
ನಾಯಿಗಳ ತರತರದ ಗಂಟಲ
ಗಾಳಿಯುರೆಗಳ ಬಡಿದು ಚಿಮ್ಮಿತು!
ಮರುದನಿಯ ಬೀರಿದುವು ಗುಹೆಗಳು,
ಕೋಟಿ ಶುನಕಗಳೊಂದೆಸಲ ಬೊ-
ಬ್ಬಿರಿಯುವಂದದೊಳಡವಿಯೊರಲಿತು
ಬೊಬ್ಬೆಯುಬ್ಬರದಿ!

ನುಗ್ಗಿ ಬಂದುದು ಬೇಡಪಡೆಯಾ-
ಲಿಸುತ ನಾಯಿಗಳುಲಿಯುನೊಡನೆಯೆ
ರಾಹುತರು ಮಿಂಚಿದರು ; ದಶರಥ
ನೃಪತಿಯೇಣಿಸ ಜಾಡ ನೋಡುತ
ಹರಿಯು ಚೋದಿಸಿದ!
ಬಿಂಕದಲಿ ಕೊಂಕಿರುವ ಕೊರಲಿನ
ಪೆಂಪ ಮೆರೆಯುತ, ಶಾರದಾಭ್ರದ
ಮುಗಿಲ ಹೋಲುವ ಬಿಳಿಯ ತೇಜಿಯು
ಮನದ ವೇಗದೊಳೊಡನೆ ಸಿಡಿಯಿತು
ಧರೆಯ ಧಿಕ್ಕರಿಸಿ.
ಕೂಡೆ ಕಳಕಳವೆದ್ದು ಬೇಡರ
ಪಡೆಯು ಸಡಗರದಿಂದ ನುಗ್ಗಿತು ;
ಬಾಣಗಳ ಚೂಣಿಯೆನೆ ದಶರಥ
ಭೂಮಿಪನ ಹಿಂಬಾಲಿಸೋಡಿತು
ಹಯದ ಪರಿವಾರ.
ಕಣ್ಣೆವೆಗಳನು ಮುಚ್ಚಿ ತೆರೆವುದ-
ರಲ್ಲಿ ಬೇಡರ ಪಡೆಯು, ನಾಯ್ಗಳು,
ಕುದುರೆಯಾಳುಗಳೆಲ್ಲ ಕಣ್ಮರೆ-
ಯಾಗಿ ಬನದಲಿ ಮರಳಿ ಮೌನವು
ರಾಜ್ಯವಾಳಿದುದು.

ಗಿರಿ ಶಿಖರಗಳನಡರಿ, ಕಣಿವೆಗ-
ಳಿಳಿದು, ತೊರೆಗಳ ಹಾದು, ಝರಿಗಳ
ನೆಗೆದು, ಹಳುವನು ಹೊಕ್ಕು, ಹೊದೆಗಳ
ನುಗ್ಗಿಯಟ್ಟುವ ನಾಯಿಗಳ ಗೋ-
ಳಾಯಿಲರ ಮೋಹಿಸುತ, ವಂಚಿಸು-
ತೊಮ್ಮೆ ತೋರುತಲೊಮ್ಮೆ ಮರೆಯಾ-

ಗುತ್ತ ಪೊಮ್ಮರೆ ತೋರಿ ತೋರದ
ತೆರದಿ ಮಿಂಚುತಿರೆ,
ಬಸವಳಿದು ಬಳಲಿದರು ಬಿಯದರು,
ನಾಯಿಗಳು ಮೇಲುಸಿರನೆಳೆದುವು,
ಬಾಯ್ನೊರೆಯ ಕಾರುತ್ತ ಕುದುರೆಗ-
ಳೆಲ್ಲ ಸೋತುವು; ರಘುಕುಲೇಶನ
ವಾಜಿಯೊಂದೇ ಹಿಂಜರಿಯದೆಯೆ
ಸಾಗಿದುದು ಮುಂದೆ!
ಹಿಂದುಳಿಯೆ ಪರಿವಾರ, ಗಣನೆಗೆ
ತಾರದರಸನು ಮಿಗವ ಮೋಹಿಸಿ,
ತೇಜಿಯನು ಚಪ್ಪರಿಸಿ ಚೋದಿಸಿ,
ಕರದ ಭಲ್ಲೆಯ ನೆಗಹಿ, ಹರಿಣನು
ತೋರೆ ಗುರಿಯಿಡುತೊಮ್ಮೆ, ಕಾಣದೆ
ಚಲವ ಮೆರೆಯುತಲೊಮ್ಮೆ, ಮುಂದಕೆ
ಮಿಂಚಿ ಮುಂಚುತಿರೆ,
ಮೆಲ್ಲ ಮೆಲ್ಲನೆ ಬೈಗುಗೆಂಪದು
ಮಸುಗು ಮಸುಗಾಗುತ್ತಲಿರುಳಿನ
ಕರಿಯ ಸೀರೆಯ ಸೆರಗು, ಜಿಂಕೆಯ
ಕನಿಕರಿಸಿ ರಕ್ಷಿಸುವ ತೆರದಲಿ
ಮುಚ್ಚಿ ಮುಸುಕಿತು ಲೋಕವೆಲ್ಲವ;
ನೇಸರಡಗಿದನು!
ಬೆಟ್ಟ ಮರ ಗಿಡ ಬಳ್ಳಿ ಹೊಳೆ ತೊರೆ
ಬಯಲು ಬನಗಳು ಮಾಯವಾದುವು;
ಕವಿಯುತಿಹ ಕತ್ತಲೆಯ ಕಡಲಲಿ
ಮುಳುಗಿಯುರ್ವರೆ ಕರಗಿಯೊಯ್ಯನೆ
ಕರಿಯ ನೀರಾಯ್ತು!
ಕಣ್ಣು ಕತ್ತಲೆ, ಕಿವಿಯು ಕತ್ತಲೆ,
ಮುಟ್ಟಿದರೆ ಕತ್ತಲೆಯು, ಕತ್ತಲೆ

ಮುಟ್ಟದಿರಲುಸಿರೆಳೆಯೆ ಕತ್ತಲೆ-
ಯುಸಿರುಬಿಡೆ ಕತ್ತಲೆಯು, ಕಾಲವು
ಕತ್ತಲೆಯು, ದೇಶವದು ಕತ್ತಲೆ,
ದೇಹವೇ ಕತ್ತಲೆಯ ಕುಪ್ಪಸ-
ವಾಯ್ತು ಜೀವನಿಗೆ!
ಕಾಲಿರದ, ಕೈಯಿರದ, ದೇಹವ-
ದಿರದ, ರೂಪದ ಸುಳಿವ ಕಾಣದ,
ಶೀಲ ಬೂಲಗಳೊಂದುಮಿಲ್ಲದ,
ಹೃದಯದಲಿ ಹರಿಹರಿದು ಬರುವಾ
ಬಸದ ಬೆದರಿಕೆಯೆಂಬ ಛಾಯೆಯ
ಬೂತ ಬಸವನು ಸುತ್ತಿಮುತ್ತಿತು,
ಮೆಲ್ಲಮೆಲ್ಲನೆ ಹರಿದು ನುಂಗಿತು
ರಾಹುವಂದದಲಿ!

ಕತ್ತಲೆಯ ಮೊತ್ತವದು ಮುತ್ತಲು
ಸುತ್ತ ನೋಡುತ ಚಿತ್ತದಲಿ ದಶ-
ರಥನು ಮುಂದಿನ ಗತಿಯ ಚಿಂತಿಸಿ,
ಕಾಣದೆಯೆ ಪರಿವಾರದವರನು,
ತನ್ನ ಮುಂದಿನ ಹಾದಿಯರಿಯದೆ,
ಹರಿಯ ದಿಟ್ಟಿಯ ನಂಬಿ ವಾಗೆಯ
ಸಡಿಲಿಸಲು, ಕುರುಡುತನಕಿಮ್ಮಡಿ-
ಯಾದ ಕಪ್ಪಿನ ಕಡಲನೀಜುತ
ತೇಲಿತಾ ತೇಜಿ!
ಬರಬರುತ ದೂರದಲಿ ಮೊರೆಯುತ
ಹರಿವ ಸರಯೂನದಿಯ ಮಂಜುಳ
ದೂರ ಪರಿಣತ ಗಾನ ಮೌನವ-
ನೆಚ್ಚರಿಸಿ ಪಸರಿಸಿತು ನೆಚ್ಚಿನ
ವಾಣಿಯಂದದಲಿ!

ನೀರಡಸಿದಾ ಕುದುರೆ ಸಲಿಲದ
ಮಧುರ ನಾದವ ಕೇಳಿ ಹಿಗ್ಗುತ
ಬೇಗಬೇಗನೆ ಹರಿಯ ತೊಡಗಿತು
ಹೊಳೆಯ ಬಳಿಗಾಗಿ.
ಕತ್ತಲಲಿ, ಕಿಕ್ಕಿರಿದ ತರುಗಳ
ಮಿಳಿರುತಿಹ ಸಿರಿದಳಿರ ಜವನಿಕೆ
ತೆರೆದ ಕಂಗಳಿಗಾಚೆ, ಗಗನದ
ಹೊಳೆವ ತಾರಾಗಣವನೆದೆಯಲಿ
ತೊಟ್ಟು ಗಾಂಭೀರ್ಯದಲಿ ಹರಿಯುವ
ಹೊಳೆಯು ಶೋಭಿಸಿತು.
ತೊರೆಯ ತೀರವ ಸೇರಿ ವಾಜಿಯು
ನಿಲಲು, ದಶರಥ ನೃಪತಿ ಪಲ್ಲಣ-
ದಿಂದ ಸೈಕತ ತಟದ ಮೇಲಿಳಿ-
ದೊಡನೆ ಕಳಚೆ ಖಲೀನವನು, ತೊರೆ-
ಯೆಡೆಗೆ ಬಳಿಸಂದಶ್ವಮಿಾಂಟಿತು
ಮಧುರವಾರಿಯನು !
ಬಿಲ್ಲು ಭಲ್ಲೆ ನಿಷಂಗ ಮೊದಲಾ-
ದಾಯುಧಂಗಳ ಕಳಚುತೊಯ್ಯನೆ
ಮರಳದಿಣ್ಣೆಯ ಮೇಲೆ ಮಲಗಿಸಿ,
ದಣಿದು ನೆರೆಸಿಟ್ಟುಸಿರನೆಳೆಯುತ,
ಮೆಲ್ಲಮೆಲ್ಲನೆ ನದಿಯ ಬಳಿಗೈ-
ತಂದು ಬಾಗುತ, ಬೊಗಸೆಗೈಯಲಿ
ಧರಣಿಪಾಲನು ತೇಜಿಯೆಡೆಯೊಳೆ
ನೀರನೀಂಟಿದನು !
ವಾಹಕನು ವಾಹನವು ಜೊತೆಯಲಿ
ಕುಡಿದು ಸಲಿಲವ, ತಿರೆಗೆ ಮೆರೆದರು
ಬನಗಳಲಿ ಕತ್ತಲಲಿ ಮರಣದ

ರಾಜ್ಯದಲಿ ಯೋಗೀಶರೆಡೆಯಲಿ
ದೇವ ಸಾನ್ನಿಧ್ಯದಲಿಯೊಲವರ
ತಾರತಮ್ಯಗಳಿಲ್ಲವೆಂಬುವ
ನಿಚ್ಚ ಸನ್ನಿಯನು !

ದೊರೆಯು ತಿಳಿಸೀರೀಂಟಿ ಬಾಯಾ-
ರಿಕೆಯನಾರಿಸಿಕೊಂಡು ಮುದದಲಿ
ಮೇಲಕೇಳುತಲಿರಲು, ಬಳಿಯಲಿ
ತೊರೆಯ ತಡಿಯಲಿ ನಿಂತ ತೇಜಿಯು
ಬೆಚ್ಚಿ ಮೂಗಾಳಿಯನು ಹಿಡಿಯುತ
ಬೆದರಿ ಕೆನೆಯಿತು ; ಘೋರ ನಿಶಿಯಲಿ
ಹಯದ ಹೇಷಾರವದ ಮಾರ್ದನಿ
ಕೋಟಿ ಕುದುರೆಗಳೊರಲಿದಂತೆ ಕ-
ಠೋರ ಕರ್ಕಶವಾಯ್ತು ; ಚಮಕಿತ-
ನಾದನಾ ನೃಪತಿ !
ದನಿಬೊಮ್ಮವದಿರುಳ ಬೊಮ್ಮವ
ಕೆಣಕಲದು ರೋಷದಲಿ ನಾದವ
ನುಂಗಿಯುರಗಿಸಿಕೊಂಡ ತೆರದಲಿ
ಮೌನವತಿಯಾಯ್ತೊಡನೆ ಕತ್ತಲು
ಹೆಚ್ಚಿದಂತಾಯ್ತು !
ನಿಮಿರಿ ನಿಂತಾ ನೃಪತಿ ಕಿವಿಗೊ-
ಟ್ಟಾಲಿಸಲು ದೂರದಲಿ ವಾಹಿನಿ-
ಯೆಡೆಯೊಳಾವುದೊ ಹಿರಿಯ ಜಂತುವು
ಸಲಿಲ ಪಾನದಿ ತೊಡಗಿದಂದದಿ
ಘುಳು ಘುಳೆಂಬ ಮಹಾನಿನಾದವು
ಹಬ್ಬಿದಾ ಮೌನದಲಿ ನೂರ್ಮಡಿ-
ಯಾಗಿ ಕೇಳಿಸಿತು.

ಮದಗಜವೊ ಹೆಬ್ಬುಲಿಯೊ ಕೊಬ್ಬಿದ
ಕಾಡುಕೋಣವೊ, ಸೊಕ್ಕಿ ಮಲೆತಿಹ
ಸೂಕರವೊ, ಕೇಸರಿಯೊ ಕರಡಿಯೊ,
ಎಂದು ಶಂಕಿಸುತವನಿಪಾಲನು
ಚಿಮ್ಮಿ ಕೈಕೊಂಡಲಗು ಬಿಲ್ಗಳ
ಸಿಂಜಿನಿಯ ನೇರಿಸಿದನೊಡನೆಯೆ
ಹೂಡಿದನು ಕಣೆಯ.
ಕಣ್ಣೆರಿಯುಂವಂಧತಮವಾವರಿ-
ಸಾವೆಡೆಯುಂ ಗುರಿಯಿಲ್ಲ ಕಂಗಳಿ-
ಗಾಲಿಸಲು ದನಿಯೊಂದೆ ಕಿವಿಗಳಿ-
ಗಾಯ್ತು ಗುರಿಯು ಗವಾಕ್ಷವಾಯ್ತದೆ
ಮಾರ್ಗ ಮಾರ್ಗಣಕೆ!
ಕತ್ತಲೆಯೆ ಬೆಳಕಾಗೆ, ಮೌನವೆ
ಸೂಚನೆಯ ಕೊಂಬಾಗೆ, ಘುಳು ಘುಳು
ನಾದ ಗುರಿಗಣ್ಣಾಗಲೆಚ್ಚನು
ನೃಪತಿ ಕೂರ್ಗಣೆಯ!
ತನ್ನ ಬಾಳಿನ ಪುಣ್ಯದಕ್ಷಿಯ
ತಾನರಿಯದಿರಿವಂತೆ ರಘುಕುಲ-
ದರಸನಟ್ಟಿದನಿರುಳ ಗಬ್ಬಿಕೆ
ಮೋಘ ಭೀಕರ ಕ್ರೂರ ಘೋರ ಕ-
ಠೋರ ಸಾಯಕವ!

ಕೂಡೆ ಕತ್ತಲ ಮೌನದ ಜಿಸವ
ಹರಿಹರಿದು ರೋದನದ ರವವೊಂ-
ದೆಳೆಯ ಕುವರನ ಕೊರಲ ಕೊಯ್ಯಲು
ಹೊಮ್ಮಿ ಚಿಮ್ಮುವ ಬಾಲ ಶೋಣಿತ-
ದಂತೆ ರುದ್ರ ಭಯಂಕರಾದ್ಭುತ-
ಮಾಗಿ ತುಂಬಿ ತುಳುಂಕಿ ತೀವಿತು
ತಿಮಿರ ವಿಶ್ವವನು!

“ ಶಿವ ಶಿವಾ ತಾಯ್ತಂದೆಗಳಿರಾ!
ಸತ್ತೆಸಯ್ಯೋ! ಸತ್ತೆನಾಹಾ!
ನೀರನೊಯ್ಯುವರಾರು ನಿಮಗೆಂ”-
ದಾದನಿಯು ಕತ್ತಲೆಯ ಬಸಿರಿಂ-
ದೊರಲಿ ಚಿಮ್ಮಿದುದು.

ಇರುಳ ಕರುಳನು ಸೀಳಿ ಪೊರಮ-
ಟ್ಟಾರ್ತ ಮಧುರ ಕಿಶೋರ ವಾಣಿಯು
ನೃಪತಿಯ ಕೊಡಂಕೆಗಳನಿರಿದುದು,
ಎದೆಯ ಬಿರಿದುದು, ಮನವ ಮುರಿದುದು,
ಕೊರೆವ ಚಳಿಯುಂದಡಲಿ ಹರಿದುದು
ನಾಳನಾಳಗಳಲ್ಲಿ ನೆತ್ತರು
ಹೆಪ್ಪುಗೊಳುವಂತೆ!
ಕಾಳೆಗದಿ ಕೂರಸಿಯ ಮಿಂಚನು
ನೋಡಿಯುಳುಕದ ವೀರ ವೀರನು,
ಝುಂಕರಿಪ ಸಿಂಜಿನಿಯ ಟಂಕೃತಿ-
ಗೆದೆಗೆಡದ ಪಟುಭಟನು, ಹರಿಯುವ
ಶೋಣಿತದ ವಾಹಿನಿಯನೀಜುವ
ಬೀರ ಜೋದನು, ಗಾಯವಡೆದುರೆ
ನರಳುತಿಹ ಸೈನಿಕರ ಗೋಳನು
ಕೇಳಿಯಂಜದೆ ಬಿಂಕದಲಿ ಮುಂ-
ಬರಿವ ನರಪತಿ ಬಾಲವಾಣಿಯ
ಕೇಳಿ ನಡ ನಡ ನಡುಗಿ ಕಂಪಿಸಿ
“ ಶಿವ ಶಿವಾ” ಎಂದ!
ಕುಂದಿದುದು ಮೈಬಲವು; ಬಿದ್ದುದು
ವಜ್ರಮುಷ್ಟಿಯನಗಲಿ ಚಾಪವು;
ಕಣ್ಣು ಕತ್ತಲೆಯಿರ್ಮಡಿಸಿದುದು;
ತಣ್ಣೆಲರ ತೀಟದಲಿ ಮೈ ಬೆವ-

ರಿದುದು ; ಹೆಚ್ಚಿತು ಬೆಪ್ಪು ದೊರೆಗಾ
ಚೀರುಲಿಯು ಕೇಳಿ!
ರಾಜತಂತ್ರವಿಶಾರದನು ಕಂ-
ಗೆಟ್ಟು ಮರುಳನವೋಲು ದೆಸೆಗಳ
ನೋಡುತಿರುಳಲಿ ಸೊನ್ನೆದಿಟ್ಟಿಯ-
ನಟ್ಟಿ ಮುಂದಡಿಯಿಟ್ಟು ಜವದಿಂ-
ದೋಡಿದನು ಚೀರುಲಿಯು ಮೂಡಿದ
ತಾವಿನೆಡೆಗಾಗಿ.
ಕತ್ತಲಲಿ ಕಂಗಾಣದೆಡವುತ,
ಮೂಡಿದರೆಗಳನೇರುತಿಳಿಯುತ,
ನೆಚ್ಚನರಸುತ್ತಲೆವ ಹತಾಶನ
ತೆರದಿ, ಕಾಣದ ಮೂಲತತ್ತ್ವವ-
ನೆಳಸಿಯನ್ವೇಷಿಸುವ ತಾರ್ಕಿಕ-
ನಂತೆ ದಶರಥ ನೃಪತಿಯುರಸಿದ-
ನುಲಿಯ ಕಾರಣವ!
ಎಲ್ಲಿ ಕಣ್ಣಿಡಲಲ್ಲಿ ಕತ್ತಲು!
ಬಾನು ಕತ್ತಲು! ತಿರೆಯು ಕತ್ತಲು!
ಸುತ್ತಮುತ್ತಲು ತಿವಿವ ಕತ್ತಲು!
ಘೋರತರ ಘನನಿಬಿಡ ನಿಶೆಯಲಿ
ದಿನಪ ಕುಲಮಣಿ ಪಂತಿದೇರನು
ಬಿಡದೆ ಹುಡುಕಿದನು!

ಬನಗಳಲಿ ಬೆಳುದಿಂಗಳಹಹಾ!
ಮೂಡುವೆಟ್ಟಿನ ಬನದ ನೆತ್ತಿಯೊ-
ಳಿರುಳು ಕಣ್ದೆರೆದಂತೆ ಕೆಂಬೆಳ-
ಗೊಯ್ಯನೊಯ್ಯನೆ ತೋರಿ ತೆಕ್ಕನೆ
ಸುಧೆಯ ನಿಧಿ ಚಂದಿರನು ಕುಸುಮಿಸ-
ಲೊಡನೆ ತಣ್ಣನೆ ದೇಸಿ ತೀವುತೆ

ಜಗವ ಮುದ್ಗಿಸಿತಿಳೆಯ ಚೆಲುವಿನ
ಚಲುವೆಯಂದದಲಿ!

ಮೆಲು ಮೆಲನೆ ಮೂಡಿದುವು ಬನಗಳು
ನಟ್ಟಿರುಳ ಬಸಿರಿಂದ; ಸುಂದರ
ಮಂದಹಾಸವ ಬೀರಿ ಬಾಸಿನ
ದೇವಿ ನಲಿದಳು. ಮೆರೆವ ತಿಂಗಳ
ಜೊನ್ನ ಬೆಳ್ಸರಿಯೆಡೆಬಿಡದೆ ಸುರಿ
ಸುರಿದು ಮುಳುಗಿಸಿತಿಳೆಯನೆಲ್ಲೆಡೆ!
ಬನಗಳಲಿ ಬೆಳುದಿಂಗಳಹಹಾ,
ಚೆಲುವು ಸೊಂಪೇರೆ!

ಹೊಳೆ ಹೊಳೆವ ಪೊರೆ ಪೊರೆಯ ನಾಂತಿಹ
ವಿಲಯ ಪೂರ್ವದ ದೀರ್ಘ ಭೂಜಲ
ಚರ ವಿಜಾತಿಯ ಜಂತುವಂದದಿ
ಹಬ್ಬಿದಾ ಸೈಕತ ತರಂಗಿತ
ತಟದ ಮರಳಿನ ಮೇಲೆ ಮಲಗಿತು
ರಮ್ಯ ಕೌಮುದಿಯು!

ತೆರೆ ತೆರೆಯ ನಾಲಿಂಗಿಸಿಂಬಿನೊ-
ಳಲೆಯುವಲೆಗಳ ಶಿಖರದಲಿ ನಲಿ
ನಲಿದು ನರ್ತಿಸಿ ಮಂದಗಾಮಿನಿ-
ಯಾದ ಸರಯೂ ನದಿಯ ನಿರ್ಮಲ
ನೀಲ ವಕ್ಷಸ್ಥಳದೊಳೊರಗಿತು
ಬಾಲಚಂದ್ರಿಕೆಯು!

ಜೊನ್ನದಂಬುಧಿಯಲ್ಲಿ ಬನಗಳು
ಹೊಳೆಯು ಗಿರಿಗಳು ಮುಳುಗಿ ಕನಸಿನ
ಲೋಕದೊಡವೆಗಳಂತೆ ಮೆರೆದುವು
ಶಾಂತ ಮೌನದಲಿ!

ಹೆಚ್ಚಿಬಹ ಹಿಮಕರನ ಕಾಂತಿಯೊ-
ಳಸತಿದೂರದೊಳೊಂದು ವಸ್ತುವ
ಕಂಡು ದಶರಥ ನೃಪತಿ ಬೇಗನೆ
ಮುಂದೆ ನಡೆದನು ; ಬಗೆಯೊಳುಬ್ಬೆಗ-
ವೇರಿ ಬರುತಿರಲು !
ಮೊದಲು ಮಬ್ಬಾಗಿರೆಯ ತೆರದಲಿ
ತೋರಿಯೊಯ್ಯನೆ ಮಿಗದ ರೂಪವ-
ನಾಂತು ಮೆಲ್ಲನೆ ಮಾನವಾಕೃತಿ-
ವೆತ್ತು ಕೈಕಾಲುಗಳ ಪಡೆಯಿತು !
ದೊರೆಯು ಕಂಪಿಸಿದ !
ಹೆಜ್ಜೆ ಹೆಜ್ಜೆಗೆ ಭೀತಿ ಹೆಚ್ಚಿದು-
ದೆದೆಯು ಕಳವಳ ಮೇರೆದಪ್ಪಿದು-
ದುಸಿರು ಬಿಸುಸುಯ್ದಾದುದೊಡನೆಯೆ
ನೃಪತಿ ಹಾಯೆಂದ !
ಅಲ್ಲಿ ಸರಯೂ ತೊರೆಯ ತೀರದೊ-
ಳಲ್ಲಿ ಪಾವನ ನದಿಯ ಮೇಲೆಯೊ-
ಳಲ್ಲಿ ಸೈಕತ ಶಯನರಂಗದೊ-
ಳಲ್ಲಿ ತಿಂಗಳಿನಲರ ಬೆಳಕಿನೊ-
ಳಲ್ಲಿ ಕಾನನದಿಂಪು ತೆಕ್ಕೆಯೊ-
ಳಲ್ಲಿ ಮೌನದ ಮಡಿಲ ಶಾಂತಿಯೊ-
ಳಲ್ಲಿಯೊರಗಿದುದೊರ್ವ ಕೋಮಲ
ಬಾಲವಿಗ್ರಹವು !
ಎದೆಗೆ ನಾಟಿದ ಕಣೆಯ ಹಿಂಭಾ-
ಗವನು ಕೈಯಲಿ ಹಿಡಿದು, ವದನದೊ-
ಳಳಲ ಚಿತ್ರವ ತೋರಿ, ಕಂಬನಿ-
ಗರೆದು ತೆರೆದಿಹ ಕಂಗಳಿವೆಗಳ-
ನಿನಿತು ಚಲಿಸದೆ, ನಟ್ಟದಿಟ್ಟಿಯ

ಬೀರಿ, ಸೂಸಿದ ರಕ್ತಪಂಕದ
ಮೇಲೆ, ಬಾಡಿದ ಬಾಲಕುವಲಯ-
ದಂತೆ ಬಿದ್ದುದು ತರುಣಮೂರ್ತಿಯು
ದಶರಥನ ಮುಂದೆ!

ಮಾಯವಾದುದು ಬಗೆಯ ಕಳವಳ;
ಭೀತಿಯುಬ್ಬೆಗಳಿಳಿದುವೆದೆಯಲಿ
ಕರುಣೆ ಪಶ್ಚಾತ್ತಾಪ ದಯೆಗಳು
ಚಿಗುರಿದುವು; ಮೂಡಿದುದು ಕಜ್ಜದ
ಕೆಚ್ಚು; ಪಾರ್ಥಿವ ಧರ್ಮದುರುತರ
ಕಾರ್ಯದಕ್ಷತೆ ಮೊಳೆತುದರಸಗೆ
ತನ್ನ ಮುಂಗಡೆ ವಿಗತ ಚೇತಸ-
ನಾಗಿಯೊರಗಿದ ಮುಗ್ಧ ಮಧುರ ಕಿ-
ಶೋರನನು ಕಂಡು!

ಲೀಲೆಯತಿಶಯದಲ್ಲಿ ಬಾಲ ಮ-
ರಾಳನೊಂದೇಕಾಂಗಸಾಹಸ-
ಕೆಳಸಿ ಬಳಿಯಿಹ ತಂದೆತಾಯ್ಗಳ-
ನಗಲಿ ಮಾನಸ ಸರಸಿಯಲೆಗಳ
ನಡುವೆ ತೇಲುತಿರೆ,
ಶೈಶಿರದ ಹಿಮವೇರಿ ಚಳಿಯಲಿ
ಹೆಪ್ಪುಗಡಲಾ ಸಲಿಲವದರಲಿ
ಸಿಲ್ಕಬಿಳ್ದ ಕಿಶೋರ ಹಂಸವು
ಹಾರಲಾರದೆ ಮೆಯ್ಯ ಮರೆಯುವ
ತೆರದಿ ತಿಂಗಳ ಸೊದೆಯ ಕಡಲಿನೊ-
ಳಾಳ್ದ ಮರಳಿನ ಮೇಲೆ ಮಲಗಿದ-
ನಲ್ಲಿ ಬಾಲಕನು!
ಬಾಗಿ ಮೊಳಕಾಲೂರಿ ದಶರಥ
ನೃಪತಿ ನಾಟಿದ ಕಣೆಯನೀಚೆಗೆ

ತೆಗೆಯಲೆಳಸಿದನಾದರಾಹಾ!
ಬಾಲದೇಹದ ಮಿಂಚುಗೆಂಪಿನ
ನೆತ್ತರೊರತೆಯು ಚಿಮ್ಮಿಯರಸನ
ಕೆನ್ನೆಗಳ ಚುಂಬಿಸಿತು ಬೆಚ್ಚಗೆ!
ನಿಮಿರಿ ನಿಂತನು ದೊರೆಯು ಕಂಪಿಸಿ
ತೆಗೆಯಲಾರದೆ ಕುವರನೆದೆಯನು
        ಹೊಕ್ಕ ಕೂರ್ಗಣೆಯು!
ನೋಡುತಿರೆ ಶೋಣಿತವ ಭೂಪತಿ,
"ಪಾಪಿ ನೀ ನಡೆ! ಮುಟ್ಟದಿರು ನಡೆ!"
ಎಂಬ ತೆರದಲಿ ಮೂಕ ರಕ್ತವು
        ಹರಿದುದೆದೆಯಿಂದ!
ದೊರೆಯು ಬಿಸುಸುಯ್ದಂತರಿಕ್ಷವ
ನೋಡಲದು "ನಡೆ ಪಾಪಿ" ಎಂದಿತು!
"ಪಾಪಿಗಳು ನಾವಲ್ಲ ನೋಡದಿ-
ರೆಮ್ಮ ನೋಡದಿರೆ"ಂದು ಚುಕ್ಕಿಗ-
        ಳೆಲ್ಲ ಮಿಣುಕಿದುವು!
ಸಾಕ್ಷಿಯಾಗುವ ಭಯದಿ, ಜವದಲಿ
ಬಳಿಯ ಸರಯೂ ನದಿಯು ಹರಿದುದು!
ಮುಂದೆ, ಧರ್ಮನ ಮುಂದೆ ನಿಲ್ಲಲು
ಬೆದರಿ ಬಂಡೆಗಳೆಲ್ಲ ತಳೆದುವು
ಜಡತನದ ವೇಷವನು! ಬನಗಳು
ಪಾಪಿಯರಸನ ಗೊಡವೆ ತಮಗೇ-
ಕೆಂದು ನಿದ್ದೆಯ ನಟಿಸಿ ಮೌನದೊ-
ಳಿದ್ದುವಾಯೆಡೆ! ಗಾಳಿಯೊಯ್ಯನೆ
ಕೊಲೆಯ ಪಾಪದ ಸೋಂಕಿಗಂಜುತ
        ಸುಳಿಯದಡಗಿದುದು!
ನನ್ನಿಯನು ಮರೆಮಾಡಿ ಠಕ್ಕಿಸಿ-
ದಿರುಳು ತಪ್ಪಿಸಿಕೊಂಡು ತೆರಳಿತು;

ನಾದಕೆಡೆಗೊಟ್ಟಾ ತರಂಗಿಣಿ-
ಯರಿಯುದವರಂದದಲಿ ಹರಿದುದು ;
ಸದ್ದನೊಯ್ದಾ ಮಾರುತಸು ಸ-
ದ್ದಿಲ್ಲದಂತೆಯೆ ಮಾಯವಾದಸು ;
ನೃಪತಿಯೊಬ್ಬನೆ ಪಾಪಿಯಾದನೆ
ಧರ್ಮ ದೃಷ್ಟಿಯಲಿ!

ಬೊಗಸೆಗೈಯಲಿ ಬಳಿಯ ಸರಯೂ
ನದಿಯ ನೀರಸು ತಂದು ಚಿಮುಕಿಸಿ,
ಸುರಿವ ನೆತ್ತರವೊರಸಿ, ಬಿಜ್ಜಣ-
ವಿಕ್ಕಿದಸು ತನ್ನುತ್ತರೀಯದ
ಸಿರಿಯ ಸೆರಗಿನಲಿ.
ಶಬ್ದವೇದಿಯ ಕರೆಯ ನಿಂದಿಸಿ,
ಮಸದಿ ಬೇಂಟೆಯ ಹಳಿದು, ಶೋಕಿಸಿ,
ಭಕ್ತಿಯಲಿ ತನ್ನಿಷ್ಟದೈವವ
ನೆನೆದು, "ಮಿಂಚಿದ ಕಜ್ಜವಸು ಹಿಂ-
ತಿರುಗಿಸುವರಿಹರಾರು? ಬಲ್ಲಿರೆ?
ನೆಲವನೀಯುವೆ ನಿಮಗೆ! ದಶರಥ-
ತನವದೇಕೆ"ಂದ!
ರಘುಕುಲಾಧಿಪನಿಂತು ಬಿಜ್ಜಣ-
ವಿಕ್ಕುತಿರೆ ಮೈತಿಳಿದು ಬಾಲಕ-
ಸುಸಿರನೆಳೆದನು; ನೋವಿನಲಿ ನರ-
ಳುತ್ತ ಕರೆದನು ತಂದೆತಾಯ್ಗಳ;
ಕಂಗಳನು ಚಲಿಸುತ್ತ ನೋಡಿದ-
ನವನಿಪಾಲನನು
ನೆಚ್ಚುದಿಸಿ ಬಿಸುಸುಯ್ಯುತರಸನು :
"ಬಾಲ ನೀನಾರವನು? ನೋಡಿದ-
ರಮಲ ಮುನಿಗಳ ಕುವರನಂತಿಹೆ!

ಪರ್ಣಶಾಲೆಯುದೆಲ್ಲಿ? ಕತ್ತಲೊ-
ಳಿಲ್ಲಿಗೈತಂದೇತಕೆನ್ನನು
ಪಾಪಕಿಳಿಸಿದೆ? ಮುದ್ದುಕುವರನೆ,
ಹೇಳು, ಹೆದರದೆ ಹೇಳು! ದಶರಥ
ನೃಪತಿ ನಾನೆ''ಂದ!
ಶೋಕ ವಾಣಿಯು ಕೇಳಿ ಬಾಲಕ-
ನೊರೆದನಿಂತೆಂದರಸನುಮ್ಮಳ-
ವಿಮ್ಮಿಡಿಸೆ, ನೋವಿಸಲಿ ಗದ್ಗದ
ಕಂಠ ಗದಗದಿಸೆ:
''ಕೇಳು ದಶರಥ ನೃಪತಿ, ಪಿಂಗಳ
ಮುನಿವರನ ಮಗ ನಾನು. ಮುದುಕನು
ತಂದೆ, ಮುದುಕಿಯು ತಾಯಿಯುವರಿಗೆ
ಕಣ್ಣು ಕಿವಿಕಾಲೆದೆಯು ಜೀವಗ-
ಳನಿತು ನಾನಹೆ! ನಡೆಯಲಾರರು!
ನೋಡಲಾರರು! ಕೇಳಲಾರರು!
ಸಿಂಧುವೆಂಬುದು ನಾಮವೆನಗಿಹು-
ದವರ ಸೇವೆಯೆ ನನ್ನ ಪೂಜೆಯು!
ಪಿತೃಗಳೇಕಾದಶಿಯ ಉಪವಾ-
ಸದಲಿ ಬಳಲಿಹರೆಂದು ಸಲಿಲವ-
ನೊಯ್ಯ ಬಂದೆನು ನಿಶೆಯೊಳಿಲ್ಲಿಗೆ.
ಬಳಲಿ ಬಾಯಾರಿಹರು; ನನ್ನನೆ
ಕಾಯುವರು. ನೋಯುವರು ತಳುವಿದ-
ರಾನು. ಸಲಿಲವ ಕೊಂಡು ಬೇಗನೆ
ಹೋಗಿ ಬಾಯಾರಿಕೆಯ ನೀಗಿಸು!
ಕಡೆಯ ನಿನ್ನುಪಕಾರವೆನಗಿದು!
ನನ್ನ ಬಿಡು, ನಡೆ. ಬಳಿಯ ಕಣಿವೆಯ
ನಡುವೆ ಮರಗಳ ಕರಿಯ ನೆರಳಲಿ
ಪರ್ಣಶಾಲೆಯುದಿಹುದು. ನಡೆ, ನಡೆ,

ತಂದೆತಾಯಿಗಳೊರಲುತಿರುವರು ;
ತೆರಳಿ ಸಂತವಿಸು!''

ಇಂತೊರೆದು ಮುನಿಸುತನು ಕಂಗಳ
ಮುಚ್ಚಿದನು: ದಿನಮಣಿಯು ಮುಳುಗಲು
ಬಿರಿದ ತಾವರೆ ದೀನ ದುಃಖದಿ
ಮುಗುಳುವಂದದಲಿ!
ಮುಗಿಲಿನಲಿ ಮೈದೋರಿ ಮೋಹನ
ಮಧುರ ಮಹಿಮೆಯ ಮೆರೆದು ಮರಳುವ
ಮಳೆಯ ಬಿಲ್ಲಿನೊಲು
ಜೀವವಡರಿತು ತನ್ನ ನಿಲಯಕೆ,
ತಾವರೆಯ ಸೆರೆಯಲ್ಲಿ ಸಿಲುಕಿದ
ದುಂಬಿಯಿನನುದಯದಲಿ ಮುಕ್ತಿಯ
ಹೊಂದಿ ಪರಮಾನಂದದತಿಶಯ-
ದಿಂದ ಹಲ್ಲೆಯ ನೆನೆದು ಬೀಡಿಗೆ
ಹಾರುವಂದದಲಿ!
ಕಾಂತಿ ಮೊಗದಲಿ ಮಸುಳೆ, ಹರಿದಿಹ
ಕವಿತೆಯಂದದಿ ತರಳನೊರಗಿರೆ,
ಮರಣ ಚಿಹ್ನೆಯನರಿತು ದಶರಥ
ನೃಪತಿ, ತನ್ನನು ಕೊಲೆಗೆ ನೂಂಕಿದ
ಬಿದಿಯನತಿ ಶೋಕದಲಿ ನಿಂದಿಸಿ,
ನಿಶ್ಚಯಿಸಿದನು ಮನದಿ ಸಲ್ಲಿಸೆ
ತನ್ನ ಕೂರ್ಗಣೆ ಬೀಳ್ದ ಬಾಲನ
ಕಡೆಯ ಕೋರಿಕೆಯ.
ಮೋಹ ಮಿತಿಮೀರೊಡೆದ ನೆಚ್ಚನು
ಮರಳಿಯಾಲಿಂಗಿಸುವ ಕಾಮುಕ-
ನಂತೆ ಬಾಗುತ ನೆಗೆಹಿದನು ದಶ-
ರಥನು ನೆತ್ತರು ಸೋರುತಿರ್ದಾ
ಕೋಮಲಾಕೃತಿಯ!

ನೇಸರಿನ ಬಳಿಯುರಸನೀಪರಿ
ಹೆಣವನೆತ್ತಿದ ಘೋರ ದೃಶ್ಯವ
ಕಂಡು ಕಂಪಿಸಿತಿರುಳು, ನಡುಗಿತು
ನದಿಯು, ಬೆದರಿತು ಬನವು, ಸೆಡೆತುದು
ಬನದ ಕೌಮುದಿಯು!
ನೆಗಹಿ ತರುಣನ, ದೊರೆಯು ಬಳಿಯಿಹ
ಸಲಿಲ ಕಲಶವ ಕೊಂಡು ಕೈಯಲಿ
ಮುಂದೆ ನಡೆದನು ಜವದ ಜವದಲಿ;
ಪುಣ್ಯಪುರುಷನ ಮುಡಿದು ಮೈಯಲಿ,
ಪಾಪ ಭಾರದಿ ಕುಸಿದು ಗುರುವಿನ
ಬಳಿಯನೈದುವ ಶಿಷ್ಯನಂದದಿ
ಬಳಿಗೆ ಪಿಂಗಳನ!

ಮುತ್ತಿ ಬಹ ತಣ್ಗದಿರನಾಟೋ-
ಪವನು ಹಿಂಗಿಸೆ, ತಿಮಿರ ರಾಕ್ಷಸಿ
ಬನದ ರಕ್ಷಣೆಗಿಟ್ಟ ಪಹರೆಯ
ರಕ್ಕಸರ ಪಡೆಯಂತೆ ನಿಂತಾ
ಹೆಮ್ಮರಗಳೆಡೆಯಲ್ಲಿ ನುಸುಳುತ
ತೋರಿ ಮರೆಯಾಗಿ,
ಗಗನ ದುರ್ಗವ ಲಗ್ಗೆಯೇರಲು
ಕಿಕ್ಕಿರಿದ ಕಾಲಾಳುಗಳ ದಳ-
ದಂತೆ ಪರ್ವತ ಪಕ್ಷದೋರೆಯ
ಮುತ್ತಿ ಮುಚ್ಚಿ, ಮುಸುಂಕಿ ಕವಿಯುತ,
ಹಜ್ಜೆ ಹೆಜ್ಜೆಗೆ ಹೆಣೆದುಕೊಂಡಿಹ
ಗುಲ್ಮಗಳ ನಡುಹೊಕ್ಕು ಹೊಮ್ಮುತ,
ತಡವುತೆಡವುತ್ತ,
ದಿಣ್ಣೆಯೇರುತ ತಗ್ಗನಿಳಿಯುತ-
ಲೊಮ್ಮೆ ಬೆಳಕಿನೊಳೊಮ್ಮೆ ನೆರಳಿನೊ-

ಳೊಮ್ಮೆ ಕಾಣುತಲೊಮ್ಮೆ ಕಾಣದೆ-
ಯೊಮ್ಮೆ ತರಗೆಲೆಗಳಲಿ ಹಾರುತ-
ಲಿನಕುಲೇಶನು ಮುಂದೆ ನಡೆದನು
ತನ್ನ ನೂಡನು ತಾನೆ ಹುಡುಕುತ,
ಮುಸಣದಲಿ ತಿರುತಿರುಗಿ ಮೌನದಿ
ಬರಿದೆ ತೊಳಲುವ ಮಾಯದಿರುಳಿನ
ಮರುಳಿನಂದದಲಿ !

ಸುತ್ತ ನೋಡುತ ಪರ್ಣಶಾಲೆಯ-
ನರಸಿ ಬರುತಿರೆ ದೊರೆಯು ಕಂಡನು,
ಮರದ ಕರಿನೆರಳಲ್ಲಿ ದೂರದಿ,
ಬೊಮ್ಮಗಬ್ಬದೊಳುರಿಯುವೊಲ್ಮೆಯು
ಮಂಗಳಾರತಿಯಂತೆ ಮಿನುಗುವ
ನೂಡರ ಕುಡಿಯನು. ಬಗೆಯು ಬೆಚ್ಚಿತು ;
ಜನಪ ನಡುಗಿದನು !

ಅಲ್ಲಿ ಹಣತೆಯು ನೂಡರಿನೆಡೆಯಲಿ,
ನಿಶೆಯೊಡನೆ ಮಾರಾಂತು ಬಳಲಿದ
ಬೆಳಕಿನಲಿ, ಮುದಿದವಸಿ ಪಿಂಗಳ-
ನವನ ಸಹಧರ್ಮಿಣಿಯು ಬಳಿಯಲಿ
ಮೆಲು ನುಡಿಯ ಮಾತುಗಳಲಿರ್ದನು,
ಬಣ್ಣದಲಿ ಬರೆದಿರುವ ದೂರದ
ಮಬ್ಬುಗನಸಂತೆ !

ಕಾಲ ನಮೆದಿಹ ಮೆಯ್ಯ ಮುದುಕರು,
ಕಣ್ಣ ಬೆಳಕಳಿದಿರುವ ಹಳಬರು,
ಸದ್ದಡಗಲಿಪ ಕಿವಿಯ ವೃದ್ಧರು,
ಶಕ್ತಿ ಕುಂದಿದ ಗತಿಯ ಮುನಿಗಳು
ಹಸಿದು ಬಾಯಾರವರ ಕುವರನ

ಬರವ ಹಾರೈಸುತ್ತ, ತಳುವಿದ-
ನೇತಕೆಂಬುದನರಿಯಲಾರದೆ
ಹಿರಿಯ ಕಳವಳದಿಂದಲಿರ್ದರು
ಮಗನ ಮೋಹದಲಿ!
ಪರ್ಣಶಾಲೆಯ ಬಳಿಗೆ ಮೆಲ್ಲನೆ
ರಘುಕುಲೇಶನು ಬರಲು ಮುನಿಸತಿ
ತರಗೆಲೆಯ ಮರ್ಮರವನಾಲಿಸಿ,
ಹೆಜ್ಜೆ ಸಪ್ಪಳವರಿತು, ಕುಂದಿದ
ಮಂದ ದೃಷ್ಟಿಯ ಬೀರಿ ಕಂದನ
ಕೂಗಿ ಕರೆದಳು: "ಮಗನೆ ಬಂದೆಯ?
ಎನ್ನ ಮುದ್ದಿನ ಕಂದ ಬಂದೆಯ?
ಎನ್ನ ಬಾಳಿನ ಕಣ್ಣೆ ಬಂದೆಯ?
ಎನ್ನ ಜೀವನದುಸಿರೆ ಬಾ, ಬಾ,
ನೀರ ತಂದೆಯ ತಂದೆ! ಹೆತ್ತೊಡ-
ಲುರಿಯ ನಂದಿಸು; ನೊಂದ ತಾತನ
ಸಂತವಿಸು ಬಾ! ಕಂದ ಬಾ, ಬಾ!"
ಎಂದಳಾ ತಾಯಿ!
ಕೇಳಲದು ದಶರಥನು ಮಮ್ಮಲ
ಮರುಗಿದನು; ಕಂಬನಿಯ ಕರೆದನು;
ಹೊತ್ತ ಹೆಣವನು ಹಿಡಿದು ಕೈಯಲಿ,
ಜೀವವನು ಸೆಳೆದೊಯ್ವ ಸಾವಿನ
ತೆರದಿ ಮುನಿಗಳ ಪರ್ಣಶಾಲೆಯ
ಹೊಕ್ಕು ನಿಂತನು, ಧರ್ಮನೆದುರಲಿ
ತನ್ನ ಪಾಪವನೊಪ್ಪಿಕೊಳ್ಳುವ
ವೀರನಂದದಲಿ!
ಬೇಟೆಗಾರನು ಕೊಂದು ತಂದಿಹ
ಹರಿಣ ಶಿಶುವಿನ ತೆರದಿ ಸಿಂಧುವು

ದಶರಥನ ತೆಕ್ಕೆಯಲಿ ಸಿಲುಕಿರೆ
ರಕ್ತಪಂಕದಲಿ,
ಘೋರ ದೃಶ್ಯವ ಕಂಡು ಸಡಸಡ
ಸಡುಗಿ ಹಾಯೆಂದೊರಲಿದನು ಮುನಿ;
ಚೀರಿದಳು ಮುನಿಸತಿಯು; ಜನಪನು
ಹೊತ್ತುಕುವರನ ಕೆಂಪು ಕಾಯವ
ನೆಲದೊಳಿಳುಹಿದನು!

ಸಿಡಿಲ ಬಡಿತಕೆ ಹಳೆಯ ಹೆಮ್ಮರ
ತಿರೆಗುರುಳುವಂದದಲಿ ಮುನಿಸತಿ
ತನ್ನ ಕಂದನ ಮೇಲೆ ದೊಪ್ಪೆಂ-
ದುರುಳಿ ಬಿದ್ದಳು! ಮುನಿಯು ಜನಪನ
ನೋಡುತಿರೆ ಕೈಮುಗಿದು ದಶರಥ-
ನಾತಗಿಂತೆಂದ:

"ಕತ್ತಲಲಿ ಕಂಗಾಣದೆಸಗಿದ
ತಪ್ಪ ಮನ್ನಿಸು ದೇವ! ಕಂದನ
ಕೊಂದ ಪಾತಕಿ ನಾನು! ದಶರಥ-
ನೆಂಬರೆನ್ನನು! ಯೋಗದೃಷ್ಟಿಯೊ-
ಳಾದುದೆಲ್ಲವ ಬಲ್ಲೆ ನೀನೆಲೆ
ಗುರುವೆ! ನಿನಗಿನ್ನೇನನರುಹಲಿ?
ಮುಡಿಯಿಡುವೆ ನಿನ್ನಡಿಯೊಳೆನ್ನನು
ಕಾಯ್ದುಕೊಳ್ಳೈ" ಎನುತ ಬಿದ್ದನು,
ಪುಣ್ಯಕೆರಗುವ ಪಾಪದಂದದಿ,
ಋಷಿಯ ಚರಣದಲಿ!

ಬಿದ್ದ ಭೂಪನ ತಲೆಯ ನೆಗಹುತ
ಶಾಂತ ವಾಣಿಯಲೆಂದನಾ ಮುನಿ:
"ಏಳು! ನೃಪತಿಯೆ ಏಳು! ಶಪಿಸೆನು

ನಿನ್ನನಾದರೆ ಕಾಲಗರ್ಭವ
ಹೊಕ್ಕ ದೃಷ್ಟಿಗೆ ತೋರುತಿದೆ: ನೀ-
ನಳಿವ ಸಮಯದಿ ನಿನ್ನ ಪುತ್ರರು
ಬಳಿಯೊಳಿರದೆ ವನಾಂತರದಿ ಸಂ-
ಚರಿಸುತಿರುವರು! ಸುತರನಗಲಿದ
ನೀನು ದುಃಖದಿ ಮಡಿವೆ! ಕರ್ಮದ
ಧರ್ಮ ಶೃಂಖಲೆಯಿದನು ಕಂಡೆನು
ದಿವ್ಯ ದೃಷ್ಟಿಯಲಿ!
ಕೇಳು ನುಡಿವೆನು, ಕಡೆಯ ಮಾತಿದು!
ಬಾಳಿನಳಲಿಗೆ ಶಾಂತಿಯೊಂದಿಹು-
ದೊಂದಿಹುದು ಬೇರಿಲ್ಲ: ಬದುಕಿದು,
ಸುಖವೊ? ದುಃಖವೊ? ದೇವನೆಂಬುವ-
ನಮಿತ ಕರುಣಾಸಿಂಧುವಾತನ
ಸೃಷ್ಟಿಯಿದು; ತುದಿಯಲ್ಲಿ ಮಂಗಳ-
ವಪ್ಪುದಾತನ ಮುತ್ತು ಮಲಗಿಹು-
ದೆಲ್ಲರೆದೆಗಳ ಮೇಲೆ—ಎಂಬುದೆ
ನಿಜದ ನಂಬುಗೆಯು!"

ಇಂತು ನುಡಿದಾ ಮುನಿಯು, ಕಂಗಳ
ಮುಚ್ಚಿ, ಯೋಗದ ದೀರ್ಘನಿದ್ರೆಯೊ-
ಳೈಕ್ಯವಾದನು! ದೊರೆಯು ಮಸಣದ
ಗಾಳಿಯಂದದಿ ನಿಂತನೊಬ್ಬನೆ—
ಪರ್ಣಶಾಲೆಯಲಿ!
ನಿಶೆಯ ಮೌನವು ಹರಡಿತೆಲ್ಲೆಡೆ-
ಯಲ್ಲಿ ಬನದಲಿ ಮಲಗಿ ನಲಿದುದು
ಮಧುರ ಮೋಹನ ಸಾಂದ್ರ ಸುಂದರ
ವಿಪಿನ ಚಂದ್ರಿಕೆಯು!

---

## ಡೂಲಿ

ಪಡುವಲೆಡೆಯ ಮಲೆಗಳಲ್ಲಿ, ಹೆಬ್ಬನಗಳ ನಿಲಯದಲ್ಲಿ,
ಮುದಿತನವನೆ ಮುದುಗಿಸಿರುವ ಹಸುರ ಹೆಮ್ಮೆ ಹೊಮ್ಮವಲ್ಲಿ,
ಬೇಟೆನಾಯಿಯೊಡನೆ ಕೂಡಿ ತಿಮ್ಮನಿರಲು ಬೇಟೆಯಾಡಿ
ಮೂಡಲಲ್ಲಿ ಮುದ್ದು ಬಿಸಿಲ ಚೆಲುವೆ ಚಿಮ್ಮುತಿದ್ದಿತು!

ತಿಮ್ಮ ದೊಡ್ಡ ಬೇಟೆಗಾರ, ಮಲೆಯನಾಡಿನೀಡುಗಾರ,
ಡೂಲಿಯೊಳ್ಳೆ ಬೇಟೆನಾಯಿ, ಹಿರಿಯ ಕುಲದ ಚೀನಿ ನಾಯಿ;
ಹಂದಿ ಮಿಗಗಳನ್ನು ಹಿಡಿದು ಕೀರ್ತಿವೆತ್ತುದದರ ತಾಯಿ!
ಬೇಟೆಗಾರರಿಬ್ಬರಿಂತು ಬೇಟೆಯಾಡುತ್ತಿದ್ದರು.

ಕಣಿವೆಯಿಳಿದು, ಬೆಟ್ಟವೇರಿ, ಸರುವದಾಟಿ, ಹಳುವನುಸಿದು,
ಮುಂದೆ ಮುಂದೆಯಾಗಿ ಬಂದು ನೆತ್ತರು ಹೀರುತ್ತಲಿದ್ದ
ಜಿಗಣೆಗಳನು ಕಷ್ಟದಿಂದ ಕಿತ್ತು ಕಿತ್ತು ಬಿಸುಟು ಬಿಸುಟು
ಹುಡುಕುನೋಟದಿಂದ ಬನವ ನೋಡಿ ತಿಮ್ಮ ನಡೆದನು.

ಇಂತು ನಡೆಯುತಿರಲು, ದೂರ ಬೆಳೆದ ಬಳ್ಳಿ ಹೊದರುಗಳಲಿ
ನಾಯಿ ಬಗುಳಿದಂತೆಯಾಯ್ತು, ಹಂದಿ ಹೂಂಕರಿಪವೊಲಾಯ್ತು!
ನಾಯಿಯೊಮ್ಮೆ ಹಂದಿಯೊಮ್ಮೆ ಬೊಬ್ಬೆ ಬನವ ತುಂಬಿಹೋಯ್ತು;
ಎದ್ದು ಬಿದ್ದು ಬಂದು ಸದ್ದು ಬೆಟ್ಟ ಕಣಿವೆಯಾದುದು.

ನಾಯಿ ಹಂದಿ ತಡೆಯಿತೆಂದು ತಿಮ್ಮ ನುಗ್ಗಿ ನಡೆದ ಮುಂದೆ!
ಬಂದೆ ಬಂತು ಮಾರಿಹಂದಿ ಹೂಂಕರಿಸುತ ಕೋರೆ ಮಸೆದು!
ಅದರ ಹಿಂದೆ ಡೂಲಿ ಬಗುಳಿ ಹಾರಿಬಂತು ಮಿಂಚಿನಂತೆ!
ತಿಮ್ಮನೊಡನೆ ಕೋವಿಯೆತ್ತಿ ಗುರಿಯ ಗುಂಡು ಹೊಡೆದನು!

ಮುಗ್ಗರಿಸುತ ಹಂದಿ ಬಿತ್ತು; ಡೂಲಿ ಕೂಗುತಾಚೆ ಬಿತ್ತು!
ತಿಮ್ಮ ಮುಂದೆಯೋಡಿ ನೋಡೆ ನಾಯಿಯಳುತ ಹೊರಳುತಿತ್ತು!
ಹಂದಿಯೊಡಲ ದಾಟಿ ಗುಂಡು ನಾಯಿಯೊಡಲ ಭೇದಿಸಿತ್ತು!
ತಿಮ್ಮನ ಕಡೆ ನೋಡುತೊರಲಿ ಡೂಲಿ ಕಣ್ಣು ಮುಚ್ಚಿತು!

# ನಾಗಿ

ಹಸುರು ಬೆಟ್ಟದ ಓರೆಯಲ್ಲಿ ಬೈಗುಗೆಂಪು ಆಡುತಿತ್ತು;
ಗರಿಯ ತೆರದಿ ಬೈಗುಗಪ್ಪು ಮೆಲ್ಲನಿಳಿಯುತ್ತಿದ್ದಿತು;
ಬೇಟೆಗಾಗಿ ಹೋದ ಮಾದ ಏಕೊ ಏನೋ ಬಾರಲಿಲ್ಲ
ಎಂದು ಮಾದಿ ಗುಡಿಸಲಲ್ಲಿ ಚಿಂತೆಮಾಡುತ್ತಿದ್ದಳು!

ದನಗಳನ್ನು ಕಾಯುತಿದ್ದ ಚಿಕ್ಕ ತಬ್ಬಲಿ ಹುಡುಗಿ, ನಾಗಿ,
ಪೆಚ್ಚುಮೋರೆ ಹಾಕಿಕೊಂಡು ಗುಡಿಸಲೊಳಗೆ ಬಂದಳು;
"ದನಗಳೆಲ್ಲಾ ಬಂದುವವ್ವಾ, ತುಂಗೆ ಮಾತ್ರ ಸಿಕ್ಕಲಿಲ್ಲ,
ಹುಡುಕಿ ಹುಡುಕಿ ಬಳಲಿ ಹೋದೆ, ಕತ್ತಲಾಯ್ತು" ಎಂದಳು.

ಸವತಿತಾಯಿ ಮಾದಿ ರೇಗಿ, ಬೆನ್ನಮೇಲೆ ಗುದ್ದಿ ಗುದ್ದಿ,
ಎದೆಯ ಬಾನಿನಲ್ಲಿ ಸಿಟ್ಟು ಮೋಡದಂತೆ ಕವಿಯಲು
ಗುಡುಗಿ ಗುಡುಗಿ ಮಿಂಚಿ ಮಿಂಚಿ, ಸವತಿತಾಯಿ ಮಾರಿಯಾಗಿ
ಪಾಪ! ತಬ್ಬಲಿ ಹೆಣ್ಣು ನಾಗಿಯ ಮೇಲೆ ಬೈಗುಳ ಕರೆದಳು.

"ಹೊಟ್ಟೆ ತುಂಬಾ ಹಿಟ್ಟು ಕೊಟ್ಟು, ಗುಡಿಸಲಲ್ಲಿ ಜಾಗ ಕೊಟ್ಟು,
ಸಾಕಿಸಲಹಿದೆ, ಮುಂಡೆ, ನಿನ್ನ, ಮೊಸಳೆಯಂತೆ ಆದೆಯಾ?
ದನವ ಕೊಟ್ಟಿಗೆಗಿಂದು ತಂದು ಕಟ್ಟದಿದ್ದ ಪಕ್ಷದಲ್ಲಿ
ಗುಡಿಗೆ ಬರಲೇ ಬೇಡ, ಹೋಗು" ಎಂದು ನೂಕಿಬಿಟ್ಟಳು.

ಪಾಪ! ನಾಗಿ, ಸಣ್ಣ ಹುಡುಗಿ, ಬಿಕ್ಕಿಬಿಕ್ಕಿ ಅತ್ತು ಅತ್ತು
ತನ್ನ ಸತ್ತ ತಾಯಿಯನ್ನು ನೆನೆದು ನೆನೆದು ಅತ್ತಳು;
"ಕತ್ತಲಾಯ್ತು, ಅವ್ವ, ಹೆದರಿಕೆ; ತುಂಗೆ ಎಲ್ಲಿ ಇದೆಯೊ ಏನೋ
ನಾಳೆ ಬೆಳಗಿನ ಜಾವದಲ್ಲಿ ಹುಡುಕಿ ತರುವೆ" ಎಂದಳು.

ಸವತಿತಾಯಿ ಮತ್ತೂ ರೇಗಿ ರೇಗಿ ಬೈದು ಬೈದೂ
"ಹೋಗು ಮುಂಡೆ, ಮನೆಯ ಒಳಗೆ ಕಾಲು ಇಡಬೇಡೆಂ"ದಳು
ಪುಟ್ಟ ಹುಡುಗಿ ನಾಗಿ ಕಂಬಳಿ ಕೊಪ್ಪೆ ಹಾಕಿಕೊಂಡು, ಅಳುತ,
ತುಂಗೆ ದನವ ಹುಡುಕಲೆಂದು ಕಪ್ಪಿನಲ್ಲಿ ಹೊರಟಳು.

ಹೋಗುತಿದ್ದ ನಾಗಿಯನ್ನು ನೋಡಿ ನೋಡಿ, ಬೈದು ಬೈದು
"ಸಾಯಬಾರದೇಕೆ ಮುಂಡೆ, ನಿನ್ನ ಋಣವು ತೀರಲಿ;
ದಾರಿಗಡ್ಡ ಮರವು ಬಿದ್ದು, ಹಾವು ಗೀವು ಬಂದು ಕಚ್ಚಿ
ಮುಗಿಸಬಾರದೇಕೆ ನಿನ್ನ" ಎಂದು ಹರಸುತ್ತಿದ್ದಳು!

ಸವತಿತಾಯಿಗಿಂತ ಕಾಡೇ ಲೇಸು ಎಂದು ತಿಳಿದು ನಾಗಿ
ತುಂಗೆಯನ್ನು ಅಂಬಾ ಅಂಬಾ ಎಂದು ಕರೆಯುತ ಹೋದಳು;
ಎಲ್ಲಿ ಕರೆದರು ತುಂಗೆ ಇಲ್ಲಾ, ಕಾಡು ಮರುದನಿ ಬೀರುತಿತ್ತು;
ಸಂಜೆವೆಣ್ಣಿನ ಕಪ್ಪು ಸೆರಗು ನೆಲವ ಮುಸುಗುತ್ತಿದ್ದಿತು!

ಗದ್ದೆಗಳನು ದಾಟಿ ಹೋದಳು; ಹಳ್ಳವನ್ನು ಹಾದುಹೋದಳು
ಹಗಲಿನಿಂದ ಹೊಟ್ಟೆಗಿಲ್ಲದೆ ತತ್ತರಿಸುತ ಹೋದಳು;
ಕಂಡ ಕರಿಯ ಕಲ್ಲು ಪೊದೆಗಳ ತುಂಗೆಯೆಂದು ಭ್ರಮಿಸಿ ಕರೆದು
ಕಾಣದೆಲ್ಲಿಯು ತುಂಗೆಯನ್ನು ಬಿಕ್ಕಿ ಬಿಕ್ಕಿ ಅತ್ತಳು.

ಜನವಿಹೀನವಾದ ಕಾಡು, ದಟ್ಟವಾದ ಮಲೆಯನಾಡು,
ನಾಗಿ ತಬ್ಬಲಿ ಪುಟ್ಟ ಹುಡುಗಿ, ಕತ್ತಲಿಳಿಯುತ್ತಿದ್ದಿತು!
ಅವಳ ಕೂಗಿಗೆ ಬೆಟ್ಟಗುಡ್ಡಗಳೆಲ್ಲ ಮರುದನಿ ಬೀರುತಿರಲು,
ಸತ್ತತಾಯಿಯು ಕರೆವ ಕೂಗೆಂದರಿತು ಮುಂದಕೆ ಹೋದಳು.

ಸತ್ತತಾಯಿಯು ಕಾಡನಡುವೆ ಎಲ್ಲೊ ಇರುವಳು ಎಂದು ತಿಳಿ
ಅವ್ವ ಅವ್ವಾ ಬಂದೆ ಬಂದೇ ಎಂದು ಅಡವಿಯ ಹೊಕ್ಕಳು.
ಬೆಟ್ಟ ಕಾಡುಗಳೆಲ್ಲ ಅವ್ವಾ ಅವ್ವ ಬಂದೇ ಬಂದೆ ಎನ್ನಲು
ಎಲ್ಲ ಮರಗಳ ಹಿಂದೆ ತಾಯಿಯ ರೂಪ ಹೊಳೆದಂತಾಯಿತು!

ಸವತಿತಾಯಿಯ ಭೀತಿಯಿರಲು, ಕಾಡುಕತ್ತಲ ಭೀತಿಯೋಡಿ
ಕೂಗು ನಿಲ್ಲಿಸಿ ತಾಯಿಯನ್ನು ಹುಡುಕಲಾರಂಭಿಸಿದಳು.
ಎಲ್ಲ ಮರಗಳ ಹಿಂದೆ ಹುಡುಕಿ, ಎಲ್ಲ ಪೊದೆಗಳ ಬಗ್ಗಿ ನೋಡಿ,
ಮೆಲ್ಲಮೆಲ್ಲನೆ ಹುಡುಗಿ ಕಾಡಿನ ಕಟ್ಟರಣ್ಯಕೆ ಹೋದಳು.

ಬೇಟೆಗಾಗಿ ಹೋದ ಮಾದ ಬೇಟೆ ಏನೂ ಸಿಕ್ಕದಿರಲು
ಕೋವಿಯನ್ನು ಹೆಗಲಮೇಲೆ ಇಟ್ಟು ಬರುತ ಇದ್ದನು ;
ದಟ್ಟವಾದಾ ಹಳುವಿನಲ್ಲಿ ಏನೊ ಹಂದುವುದನ್ನು ಕಂಡು
ಬೇಗ ಕೋವಿಯನೆಳೆದು ಗುರಿಯಿಟ್ಟಲ್ಲೆ ನೋಡುತ ನಿಂತನು.

ಕಾಡ ಕರಿಯು ನೆರಳಿನಲ್ಲಿ ಬೈಗುಗಪ್ಪಿನ ಮುಸುಗಿನಲ್ಲಿ
ಬೇಟೆಯಾಗದ ಸಿಟ್ಟಿನಲ್ಲಿ ತಾಳ್ಮೆ ಇರಲಿಲ್ಲವನಿಗೆ ;
ಅಚ್ಚುಮೆಚ್ಚಿನ ಸೊಗಸುಗಾರ್ತಿ, ಹೊಸಬಳಾದ ಮಾರಿ ಹೆಂಡತಿ-
ಗೇನನಾದರು ಕೊಂಡುಹೋಗುವೆನೆಂಬುದವನಿಗೆ ಹೆಮ್ಮೆಯು !

ನಾಗಿ ಕಂಬಳಿಕೊಪ್ಪೆಹಾಕಿಕೊಂಡು ಬರುತಿರೆ ಹಳುವಿನಲ್ಲಿ
ದೂರ, ಮಾದನ ಕಣ್ಗೆ ಕಾಡಿನ ಜಂತು ಬಂದಂತಾಯಿತು ;
ಮತ್ತೆ ನೋಡಿದ, ಕರಿಯ ಕೂದಲು ಹಂದಿ ಎಂದು ನಿಶ್ಚಯಿಸುತ
ಬೇಗ ಗುರಿಯಿಟ್ಟೀಡುಹೊಡೆದನು, ಗುಂಡು ಸಿಡಿಯಿತು ಹಾರಿತು !

ಗುಂಡು 'ಢಮ್ಮೆ'ಂದೊಡನೆ ಅವನಿಗೆ, ಏನೊ ಕೂಗು ಕೇಳಿಬಂತು :
"ಸತ್ತೆ ಸತ್ತೇ ಅಪ್ಪ ಅಪ್ಪಾ, ಅಪ್ಪ ಅಪ್ಪಾ" ಎಂದಿತು.
ಕಾಲು ನಡುಗಿ ಕೈಯು ನಡುಗಿ, ಎದೆಯು ಜೀವಗಳೆಲ್ಲ ನಡುಗಿ
ಸತ್ತ ಹೆಣದಂತಾದ ಮಾದ, ಕೋವಿ ಕೆಳಗೆ ಬಿದ್ದಿತು.

ಜೀವವನ್ನು ಕೈಲಿ ಹಿಡಿದು, ಹುಚ್ಚನಂತೆ ಬಿದ್ದು ಎದ್ದು
ಜಂತು ಬಿದ್ದಾ ಜಾಗಕಾಗಿ ಮಾದ ಓಡಿಹೋದನು ;
ಎದೆಗೆ ಗುಂಡು ಬಿದ್ದ ನಾಗಿಯು ಮಾದನನ್ನು ಕಂಡ ಕೂಡಲೆ
"ಸತ್ತೆನಪ್ಪಾ ಸತ್ತೆನಪ್ಪಾ, ಅಯ್ಯೊ ಅಪ್ಪಾ" ಎಂದಳು.

ಮಾದ "ಅಯ್ಯೊ ಕೆಟ್ಟೆನಲ್ಲಾ, ಮಗಳೆ ನಿನ್ನ ಕೊಂದೆನಲ್ಲಾ,
ಕೊಲ್ಲಲೆಂದೇ ಹೆತ್ತೆನಪ್ಪಾ ! ಅಯ್ಯೊ ಅಯ್ಯೋ" ಎಂದನು ;
"ಬೈಯಬೇಡ ಅಪ್ಪ ಎನ್ನ, ತುಂಗೆಯನ್ನು ಹುಡುಕಿ ತರುವೆ,
ಹೊಡೆಯ ಬೇಡ ಹುಡುಕಿ ತರುವೆ" ಎಂದು ನಾಗಿಯು ಸತ್ತಳು !

ಮಗಳ ನೆತ್ತರು ಹರಿದು ಹಾರಿ ಅಪ್ಪನೆದೆಯನು ತೋಯಿಸಿತ್ತು
ಅವಳ ಎದೆಯಲಿ ಹೊಕ್ಕ ಗುಂಡು ಬೆನ್ನಿನಲಿ ಹೊರಟಿದ್ದಿತು ;
ಮಾದ ಮಗಳಾ ಕೆಂಪು ದೇಹವ ಅಪ್ಪಿಕೊಂಡು ಮೂರ್ಛೆಹೋದ,
ಮೂರ್ಛೆಹೋದ ಎಂದೆನೇ, ಅದು ಸುಳ್ಳು ಸತ್ತೇಹೋದನು !

ಮಗಳ ಎದೆಯನು ತನ್ನ ಕೋವಿಯ ಗುಂಡು ಹೊಕ್ಕು ಕೊಂದರೇನು?
ತಾನೆ ಕೊಂದಾ ಮಗಳ ಸಾವೇ ಗುಂಡಿನೇಟಾಯ್ತುವಸಿಗೆ !
ಕೊಂದ ತಂದೆಯು ಸತ್ತ ಮಗಳ ಅಪ್ಪಿಕೊಂಡು ಬಿದ್ದನಲ್ಲಿ;
ಮೌನವಾದಾ ಕಾಡಿನಲ್ಲಿ ಮಾರಿಕತ್ತಲು ಮುಸುಗಿತು !

ಅಡಿಗೆ ಮಾಡಿ ಇಟ್ಟು ಮಾದಿ ಮಾದಗಾಗಿ ಕಾದು ಕಾದು
ಗುಡಿಯ ಹೊಸಲಿನಲ್ಲಿ ಕುಳಿತು ಎದುರು ನೋಡುತ್ತಿದ್ದಳು ;
ನಾಗಿ ಬರದಿರೆ ಹಿಗ್ಗಿ ಹಿಗ್ಗಿ, ಮಾದ ಬರದಿರೆ ಕುಗ್ಗಿ ಕುಗ್ಗಿ
ಕಾದು ಕಾದು ಬೇಸರಾಗಿ ಮಲಗಿ ನಿದ್ದೆಹೋದಳು !

ಮಾದ ನಾಗಿ ಇಬ್ಬರನ್ನೂ ಊರಿನವರು ಹುಡುಕಿ ಹುಡುಕಿ
ಎಲ್ಲಿಯವರ ಸುಳಿವ ಕಾಣದೆ ಮತ್ತೆ ಊರಿಗೆ ಬಂದರು.
ಗಂಡ ಹೋದನಲ್ಲ ಎಂದು ಮಾದಿ ಅತ್ತು ಅತ್ತು ಕಡೆಗೆ
ಸಿಂಗನನ್ನು ಮದುವೆಯಾಗಿ ಮಾದನನ್ನು ಮರೆತಳು.

ಆರು ತಿಂಗಳಾದ ಮೇಲೆ, ಮಾದ ಮರೆತುಹೋದ ಮೇಲೆ,
ಮಣ್ಣು ತಟ್ಟಿ ಹೆಣೆಯಲೆಂದು ಬೆತ್ತವನ್ನು ಹುಡುಕುತ
ಸಿಂಗನೊಡನೆ ಕೂಡಿ ಮಾದಿ ದಟ್ಟವಾದ ಕಾಡಿನಲ್ಲಿ
ಸರಸದಿಂದ ಹರಟೆಯಾಡಿ ಗಂಡನೊಡನೆ ಹೋದಳು.

ಅಡವಿಯಲ್ಲಿ ತಿರುಗಿ ತಿರುಗಿ, ಬೆತ್ತಗಳನ್ನು ಕಡಿದು ಕಡಿದು
ಗಂಡಹೆಂಡಿರು ಇಬ್ಬರೆರಡು ಹೊರೆಯ ಹೊತ್ತು ಬರುತಿರೆ;
ಸಿಂಗ ಬೆಚ್ಚಿ ಬಿದ್ದು ನಿಂತು ಮಾದಿಯನ್ನು ಕರೆದು ತೋರಿದ;
ಹೊತ್ತ ಹೊರೆಯ ಕೆಳಗೆ ಜರಿದು ಮಾದಿ ಮೂರ್ಛೆ ಹೋದಳು !

ದೊಡ್ಡದೊಂದು ಮರದ ಕೆಳಗೆ ದಟ್ಟವಾದ ಹಳುವಿನಲ್ಲಿ
ಒಣಗಿದೆಲೆಗಳ ಹೊದ್ದುಕೊಂಡು ಬೆಳ್ಳಗಾಗಿ ಹೊಳೆಯುತ
ಒಂದನೊಂದು ಅಪ್ಪಿಕೊಂಡ ಅಸ್ಥಿಪಂಜರವೆರಡ ಕಂಡರು!
ಸಿಂಗ ಮಾದಿಯರಿಬ್ಬರನ್ನೂ ಮೂದಲಿಸುವಂತಿದ್ದುವು!

ಕೊಳೆತುಹೋದಾ ಕಂಗಳಿಂದ ಸಿಂಗ ಮಾದಿಯರನ್ನು ನೋಡಿ,
ಕರಗಿ ಹುಳು ಹಿಡಿದಿದ್ದ ಬಾಯಿಗಳಿಂದ ಕಿಲ ಕಿಲ ನಕ್ಕವು;
ಸಿಂಗ ಮಾದಿಯರನ್ನು ನೋಡಿ ಅಸ್ಥಿಪಂಜರವೆರಡು ಎದ್ದು
ಕೇಕೆಹಾಕುತ ಒಂದನೊಂದು ಅಪ್ಪಿಕೊಂಡೇ ಬಂದುವು.

ಸಿಂಗ ಮಾದಿಯರಿಬ್ಬರಾಗ ಸತ್ತುದಿದ್ದುದನ್ನು ಮರೆತು
ಹೆದರಿ ಅಬ್ಬರಿಸುತ್ತ ಕೂಗಿ ಓಡಿ ಊರಿಗೆ ಬಂದರು;
ಬಂದ ಎರಡೇ ದಿನಗಳಲ್ಲಿ ಭೀತಿಯಿಂದ ರೋಗ ಬಂದು
ಅಬ್ಬರಿಸುತ ಹೆದರಿ ಹೆದರಿ ಕಡೆಗೆ ಸತ್ತೇ ಹೋದರು!

ನಾಗಿ ಇಂದಿಗು "ಅಂಬ ಅಂಬಾ" ಎಂದು ತುಂಗೆಯ ಕರೆದು ಕರೆದೂ
ದೆವ್ವವಾಗಿ ಕತ್ತಲಲ್ಲಿ ತಿರುಗುತಿರುವಳು ಎಂಬರು!
ಕೆಲರು, ಹುಣ್ಣಿಮೆ ರಾತ್ರಿಯಲ್ಲಿ ಅಪ್ಪಿದಸ್ಥಿಪಂಜರವೆರಡು
ಕೇಕೆಹಾಕುತ ಮಾದಿ ಸಿಂಗರ ಅಟ್ಟುತಿರುವುವು ಎಂಬರು!

## ಮಂಜಣ್ಣ ಹೇಳಿದ ಸ್ಥಳಗತೆ

ಮಂಜಣ್ಣನೊಡಗೂಡಿ ನಾನೊಂದು ದಿನದಲ್ಲಿ
ಮಲೆನಾಡ ವನಗಳಲಲೆದಾಡಿದೆ;
ತಿರುಗಾಡಿ ಮಾತಾಡುತಿಬ್ಬರೂ ಬಂದೆವು
ಗಳಗಳ ಹರಿಯುವ ತೊರೆಯೆಡೆಗೆ.
ಮಂಜಣ್ಣ ಸುತ್ತಲುಃ ದೃಷ್ಟಿಯ ಬೀರಿ
ಬೆರಗಾಗಿ ನಿಂತನು ಭಯವನು ತೋರಿ!

"ಮಂಜಣ್ಣ ಏನೆ"ಂದೆ! ಮಾತಾಡದಿದ್ದನು!
ಸುತ್ತಲೂ ನಾನೂ ನೋಡಿದೆನು.
ಕಣ್ಣಿಗೆ ತಳಿತಿಹ ವನಗಳು ಮೆರೆದುವು,
ಹಕ್ಕಿಗಳಿಂಚರ ಬೀರಿದುವು!
"ಹುಲಿಯಿಲ್ಲ, ಹಾವಿಲ್ಲ, ಹೆದರುವುದೇಕೆ?
ಮಂಜಣ್ಣ!" ಎನ್ನಲು, ಇಂತೆಂದನವನು:

"ಹುಲಿಗಳ ಸಾವಿರ ಕೊಂದಿಹೆ ನಾನು!
ಹಾವೆಂದರೆಳ್ಳಷ್ಟು ಭಯವಿಲ್ಲವು!
ಹಿಂದಿಲ್ಲಿ ನಡೆದಿದ್ದ ಸಂಗತಿಯೊಂದೆನ್ನ
ನೆನಪಿಗೆ ಬಂದಿತು! ಬಲು ಘೋರವು!
ಯೋಚಿಸಿಕೊಂಡರೆ ಮೈಯೆಲ್ಲ ನಡುಗಿ
ನಾಲಗೆ ಬಾರದು, ಮಾತೆಲ್ಲವುಡುಗಿ!

"ತವರೂರಿನಲ್ಲಿದ್ದ ಹೆಂಡತಿ ಸಿಂಗಿಯ
ಕರೆತರೆ ಹೋಗಿದ್ದ ಕರಿಸಿದ್ದನು;
ಗಂಡ ಬಂದನು ಎಂಬ ಹೆಮ್ಮೆಯಲಾಕೆಯು
ಹೊರಟಳು ಆವನಿದ್ದ ಚಿಕ್ಕೂರಿಗೆ;
ಬೈರಣ್ಣ, ತಿಮ್ಮಕ್ಕ, ಸಣ್ಣಪ್ಪ ಎಲ್ಲಾ
ಹರಿದಾರಿ ಬಂದಿವರ ಹೋದರು ಕಳುಹಿ!

"ಸೌಭದ್ರೆ ಪಾಂಡವರನ್ನೆಂದು ಕಳುಹುತ್ತ
ರಥವೇರಿ ಕೃಷ್ಣನು ಬಂದಂತೆಯೆ
ಅಣ್ಣಯ್ಯ, ಅತ್ತಮ್ಮ, ಸಣ್ಣಣ್ಣ ಎಲ್ಲಾರು
ಸಿಂಗಿಯ ಸಿದ್ದನ ಕಳುಹಿದರು!
ಸಿಂಗಿಯು, ಸಿದ್ದನು ಮಾತಾಡಿ ನಲಿಯುತ್ತ
ದಾರಿಯ ನಡೆದರು ಚಿಕ್ಕೂರಿಗಾಗಿ!

"ದಾರಿಯಲೇನೇನು ಮಾತಾಡಿಕೊಂಡರೊ
ಯಾರೇನು ಬಲ್ಲರು? ನಾನರಿಯೆ.
ಚಿಕ್ಕೂರಿಗೈದಾರು ಮೈಲಿಗಳಿರುವಾಗ
ಕತ್ಲಾಗಿ, ಮುಗಿಲೇರಿ, ಮಳೆಬಂದಿತು!
ಸಿದ್ದಗೆ ಕಂಬಳಿ; ಸಿಂಗಿಗೆ ಗೊರಬಿತ್ತು;
ಮಿಂಚೆದ್ದು ಸಿಡಿಲಾಗಿ ಜಿರ್ರೆಂದು ಜಡಿಬಿತ್ತು!

"ಈ ಹಳ್ಳದೆಡೆಗವರು ಬರುವಷ್ಟರಲ್ಲಿಯೆ
ಎರಡಾಳು ನೀರೇರಿ ಭೋರೆನ್ನುತಿತ್ತು;
ಕಗ್ಗತ್ತಲವರಿಗ ಗೊತ್ತಾಗಲಿಲ್ಲವು!
ಸಿದ್ದನು ಸಿಂಗಿಯ ಕೈಹಿಡಿದು
ಮಾರಿ ಪ್ರವಾಹವ ದಾಟಲು ಹೊರಟನು
ನೀರೇರಿ ಮೊಣಕಾಲಿಗೆದೆಯುದ್ದ ಬಂದಿತು.

"ಸಿಂಗಿಯು ಬೇಡೆಂದಳಾದರೂ ಸಿದ್ದನು
ಹೆದರದೆ ಹಾಯಲು ತೊಡಗಿದನು!
ತುಸುದೂರ ಹೋದವ 'ನಬ್ಬಬ್ಬ!' ಎಂದನು.
ಮೂಗಿನವರೆಗು ನೀರೇರಿತು.
ನೀರಿನ ರಭಸವು ಕಾಲೆತ್ತೆ ಬಿಡಲಿಲ್ಲ!
ಹಿಂದಕ್ಕೆ ಹೋಗಲು ಕೈಲಾಗಲಿಲ್ಲ!
"ವೇಗದಿ ಬಂದಿತು ಗುಡ್ಡದ ಮಳೆನೀರು
ಮರಮುಟ್ಟುಗಳನೆಲ್ಲ ತೇಲುತ್ತ;

ಭಯದಿಂದ ಸಿಂಗಿಯು ಸಿದ್ದನ ತಬ್ಬಿದ-
ಳಯ್ಯಯ್ಯೋ ಮೃತ್ಯುವಿನಾಲಿಂಗನ!
ನಿಲ್ಲಲಾರದೆ ಸಿದ್ದ ಹತ್ತಿರವಿದ್ದ
ಕಿರಿದೊಂದು ಮರವನ್ನು ಆಲಿಂಗಿಸಿದ್ದ!

"ಸಾವನೆ ಕಾರುವ ಕಾರದು ಸುರಿಯಿತು;
ಮತ್ತೆಷ್ಟು ಬಲವಾಗಿಯುಪ್ಪಿದರು!
ಮಕ್ಕಳ ನೆನಪಾಗಿ ಗುಡಿಸಲೆ ಕಣ್ಮುಂದೆ
ನಿಂತಂತೆ ಅವರಿಗೆ ಕಂಡಿತ್ತು!
ಮುಂದೇನು ನಡೆಯಿತೊ ನಾ ಹೇಳಲಾರೆ!
ಬಲು ಘೋರ! ಬಲು ಘೋರ! ನೀ ಕೇಳಲಾರೆ!"

---

## ಕರಿಸಿದ್ದ

ತೀರ್ಥಹಳ್ಳಿಯ ಕಳೆದು, ತಾಯಿ ತುಂಗೆಯ ದಾಟಿ,
ಒಂಬತ್ತು ಮೈಲಿಗಳ ದೂರದಲಿ, ನಮ್ಮೂರು
ಕುಪ್ಪಳಿ. ಊರಲ್ಲ ನಮ್ಮ ಮನೆ. ನಮ್ಮ ಕಡೆ
ಊರೆಂದರೊಂದೆ ಮನೆ. ಪಡುವೆಟ್ಟುಗಳ ನಾಡು.
ದಟ್ಟವಾದಡವಿಗಳು ಕಿಕ್ಕಿರಿದ ಮಲೆನಾಡು.
ಸುತ್ತಲೂ ಎತ್ತರದ ಬೆಟ್ಟಗಳು, ಕಾಡುಗಳು ;
ಎತ್ತ ನೋಡಿದರತ್ತ ಸಿರಿಹಸುರು. ಕಣ್ಣುಗಳಿ-
ಗಾನಂದ. ಮೋಹಾತ್ಮಕೊಂದೊಸಗೆ.

ಓ ಅಲ್ಲಿ,
ದೊಡ್ಡಣಬೆಯಂದದಲಿ ನೆಲದಿಂದ ಮೇಲೆದ್ದ
ಹುಲ್ಗುಡಿಸಲೊಂದರಲಿ ಸಂಸಾರಿಯಾಗಿದ್ದ
ಕರಿಸಿದ್ದನೆಂಬುವನು. ಜಾತಿಯಲಿ ಕೀಳಂತೆ!
ನೀತಿಯಲಿ? ನಾನರಿಯೆ!—ಗಿಡ್ಡಿ ಎಂಬುವಳವನ
ಹೆಂಡತಿ.

ಒಡಜನರ ಜೀವದಲಿ ಉಬ್ಬೆಗವ
ಹುಟ್ಟಿಸುವ ಸಂಗತಿಗಳೇನಿಲ್ಲ ಎಂದೆಲ್ಲ
ತಿಳಿದಿಹರು. ಆದರಿಂದ ವಾಲ್ಮೀಕಿ ಮೊದಲಾದ
ಕಬ್ಬಿಗರು ರಾಮನಂತಹ ರಾಜರನೆ ಕುರಿತು
ಕೊಬ್ಬಿರುವ ಕಾವ್ಯಗಳ ರಚಿಸಿದರು. ನಾನೇನು
ವಾಲ್ಮೀಕಿಯೂ ಅಲ್ಲ. ನನ್ನ ಕತೆಯೂ ದೊಡ್ಡ
ಕಾವ್ಯವಾಗಿಲ್ಲ.—ಪುಟ್ಟ ಕವಿ ; ಪುಟ್ಟ ಕತೆ!
ಹದಿನೆಂಟು ವರ್ಣನೆಗಳಿಲ್ಲಿಲ್ಲ. ಯಮಕಗಳು,
ಗಮಕಗಳು, ಮೋಹಾಲಂಕಾರಗಳು, ಪ್ರಾಸಗಳು
ಇಲ್ಲಿಲ್ಲ. ನಾನೇನು ವೃತ್ತಗಳ, ಕಂದಗಳ
ಮಂದೆಗಳ ಕಾಯುತಿಹ ಕುರುಬರವನೂ ಅಲ್ಲ.

ಪಾಂಡಿತ್ಯವೆನಗಿಲ್ಲ. ಮುಚ್ಚುಮರೆ ಏತಕ್ಕೆ?
ಪಂಡಿತರ ಕಂಡರೆನಗಾಗುವುದೆ ಇಲ್ಲ.
ಪಂಡಿತರ ಮೆಚ್ಚಿಸಲು ನಾನಿಿದನು ಕಟ್ಟಿಲ್ಲ.
ದಿಟದ ಕತೆಗಾಸಿಸುವ ಪಾಮರರಿಗಾಗಿದನು
ಬರೆದಿಹೆನು. ನಾನೊಬ್ಬ ಪಾಮರನು....

ಇಂತಿರಲು—

ಕರಿಸಿದ್ದ ದಿನಗಳನು ಕಾಯುವನು. ಗಿಡ್ಡಿ
ಮನೆಮನೆಗೆ ತಿರುತಿರುಗಿ ದಿನಗೂಲಿ ಮಾಡುವಳು.
ಬಹುಕಾಲವಾದರೂ ಮಕ್ಕಳಾಗಲೆ ಇಲ್ಲ.
ಮಕ್ಕಳಿಲ್ಲದವರಿಗೆ ಪುನ್ನರಕವಾಗುವುದು
ಎಂದರಿಯರವರು. ಧರ್ಮಶಾಸ್ತ್ರವನವರು
ಕೇಳಿಯೇ ಇರಲಿಲ್ಲ. ಪುತ್ರಕಾಮೇಷ್ಟಿಯನು
ಮಾಡಲವರಿಗೆ ದುಡ್ಡೆ ಇರಲಿಲ್ಲ. ಗಂಜಿಗೇ
ಗತಿಯಿಲ್ಲ! ನೈವೇದ್ಯಕೆಲ್ಲಿಂದ ತರಬೇಕು?
.........ಪ್ರಕೃತಿ ಧರ್ಮವ ನಂಬಿ
ಕರ್ಮವನು ಮಾಡಿದರು. ಕಡೆಗೊಂದು ದಿನ ಗಿಡ್ಡಿ
ನಡುರಾತ್ರಿ ಹಿಗ್ಗಿದಳು ಒಂದು ಕೂಸನು ಹೆತ್ತು.

ಕರಿಸಿದ್ದ ಸಂತಸದಿ ಹೆಂಡತಿಯ ಶುಶ್ರೂಷೆ
ಮಾಡಿದನು; ದಾದಿಯರನೆಲ್ಲಿಂದ ತಂದಾನು
ಆ ಬಡವ! ಹರಳೆಣ್ಣೆ ಹಣತೆಯನು ಹೊತ್ತಿಸಿದ.
ಮಬ್ಬಿನಲಿ ಮಗುವನ್ನು ಪದ್ಧತಿಯ ವಿಚಾರದೆಯೆ
ಮೊರದಲ್ಲಿ ಮಲಗಿಸಿದ. ದೆವ್ವಗಳು ಬರದಂತೆ
ಹರಕು ಮೆಟ್ಟಿನ ಜೂರು ಬಾಗಿಲಿಗೆ ಕಟ್ಟಿದನು.
ಬಾಗಿಲಿನ ಮೂಲೆಯಲಿ ಪೊರಕೆಯೊಂದನು ಇಟ್ಟ!
ಬಡತನದ ತೊಟ್ಟಿಲನು ಬಲಗೊಂಡು, ಭಕ್ತಿಯಲಿ
ಮೂರು ಕಾಸನು ಸುಳಿದು ಮುಡಿಪಾಗಿ ಕಟ್ಟಿದನು!
ತಿರುಪತಿಯ ವೆಂಕಟೇಶನಿಗಲ್ಲ; ಕಾಶಿಯಲಿ

ಮಲಗಿರುವ ವಿಶ್ವನಾಥನಿಗಲ್ಲ; ಉಡುಪಿಯಲಿ ವಾಸಿಸುವ ವಾಸುದೇವನಿಗಲ್ಲ; ನಮ್ಮೂರ ತೋಟದಾಚೆಯ ಭೂತನಿಗೆ ಮುಡಿಪು ಕಟ್ಟಿದನು. ಆದರೂ ತಿರುಪತಿಯ ವೆಂಕಟನ ಭಕ್ತರಿಗೆ ಬರುವ ಸಂತಸವಾಯ್ತು. ವಿಶ್ವನಾಥನ ಭಕ್ತ-ರಾನಂದವೇ ಅವನಿಗೂ ಬಂತು. ವೈಷ್ಣವರ ಸುಖವಾಯ್ತು. ಮಾನವರ ಭಕ್ತಿಯೇ ದೇವರಿಗೆ ಶಕ್ತಿ! ನರಭಕ್ತಿಯಳಿದರೆ ಎಲ್ಲಿ ಹರಶಕ್ತಿ?

ದಂಪತಿಗಳುಲ್ಲಸದಿ ಹಿಗ್ಗಿದರು. ಹಾಲಿಲ್ಲ, ಗೀಲಿಲ್ಲ; ಎಣ್ಣೆ ಬೆಣ್ಣೆಗಳಿಲ್ಲ. ಮೊಲೆಹಾಲು ಗಂಜಿಗಳ ಬಲದಿಂದ ಬೆಳೆಯುತಿದ್ದನು ಬೈರ. ಹೆಸರಿಡಲು ಭಟ್ಟರಿಗೆ ಬಿಡಿಕಾಸು ಕೊಡಲಿಲ್ಲ. ಹುಟ್ಟಿಸಿದ ದೇವರೇ ಜಾತಕವ ಬರೆದಿಟ್ಟ! ಹುಣ್ಣಿಮೆಯ ಚಂದ್ರನಂತಿರಲಿಲ್ಲ ಆ ಬೈರ; ಗಿಡ್ಡಿ ಕರಿಸಿದ್ದರಿಗೆ ಮುದ್ದಾದ ಮಗನಂತೆ ಇದ್ದ! ಚೆಲ್ವಿಕೆಗೆ ಬಂದಂತೆಯಿರಲಿಲ್ಲ, ಚೆಂದುಟಿಯು ಇರಲಿಲ್ಲ. ಆದರೂ ಕರಿಸಿದ್ದ ಗಿಡ್ಡಿಯರ ಕಣ್ಗೆಡ್ಡವಾಗಿದ್ದ. ದೂಳಿಯಲಿ ಮಣ್ಣಿನಲಿ, ಹುಹುರಿನಲಿ, ಕೆಸರಿನಲಿ ಬಿದ್ದೆದ್ದು ಬೈರನೂರಟಾಗಿ ಕರ್ರಗೆ ಗಟ್ಟಿಮುಟ್ಟಾಗಿ ಬೆಳೆದನಾ ಮಲೆಯಲ್ಲಿ.

ಹಂಡನಾಯಿಯೆ ಅವನ ಸಂಗಾತಿ. ತನ್ನ ಬಡ ತಿಂಡಿಗಳಲಿಸಿತನ್ನು ಹಂಡನಾಯಿಗೆ ಹಾಕಿ ತಿನ್ನುವನು. ಹಂಡನಿಗು, ಕರಿಸಿದ್ದ ಗಿಡ್ಡಿಯರು ಬೇಡವೆಂದರು ಬಿಡದೆ, ತನ್ನ ಚಾಪೆಯ ಮೇಲೆ ಜಾಗ ಕೊಡುವನು ಮಲಗೆ.

ಕೋಗಿಲೆಯು ಸಣಕಿಸುವನಾಡುವನು ನಾಯೊಡನೆ;
ಚಿಟ್ಟೆಗಳನಟ್ಟುವನು; ಹಂಡನಾಯಿಯು ಮೇಲೆ
ಕುಳಿತು ಕುದುರೆಯ ಮಾಡಿ ಹೋಯೆಂದು ಕೂಗುವನು.
ತಾಯೆದೆಯ ಮೇಲ್ನಲಿವ ಶಿಶುವಂತೆ ನಲಿನಲಿದು
ಎಳಬಿಸಿಲು ಹಸುರ ಮೇಲ್ಮುತ್ತಿಟ್ಟು ಮಲಗಿರಲು
ಹತ್ತಿರದ ಬನಗಳಲಿ ಹಂಡ್ನಾಯಿಯೊಡಗೂಡಿ
ಪಿಕಳಾರ ಹಕ್ಕಿಗಳ ಗೂಡುಗಳನರಸುವನು.
—ಕರಿಸಿದ್ದ ಗಿಡ್ಡಿಯರ ಬಾಲಕನು ಹುಟ್ಟುತಲೆ
ಬುದ್ಧನಾಗಿರಲಿಲ್ಲ—ಹಕ್ಕಿ ಮೊಟ್ಟೆಗಳನ್ನು
ಕದಿಯುವನು; ಇರುವೆಗಳನರೆಯುವನು. 'ಚೀಟಿ'ಗಳ
ಬಾಲಕ್ಕೆ ಬಾಳೆನಾರನು ಕಟ್ಟಿ, ಹಾರಿಸುತ
ನೋಡುವನು ಬೆರಗಾಗಿ. ಬಣ್ಣಬಣ್ಣದ ಚಿಟ್ಟೆ-
ಗಳನಟ್ಟಿ ಹಿಡಿಹಿಡಿದು ಪೀಡಿಪನು. ಗೂಡಿನಲಿ
ಹಕ್ಕಿಮರಿಗಳ ಕಂಡು, ಬಾಯ್ದೆರೆಯಲವು ಹಣ್ಣು
ಹಾಕುವನು ಸಂತೋಷದಿಂದ, ಆ ಮರಿಗಳಿಗೆ
ತಾನೆ ತಾಯಾಗಿ.

ಮಗನ ಬೆಳವಣಿಗೆಯನು
ಕಂಡು ಕರಿಸಿದ್ದ ಗಿಡ್ಡಿಯರು ಹಿಗ್ಗಿದರು.
ಚಂದ್ರನುದಯವ ಕಂಡು ಸಂತಸದಿ ಹಿಗ್ಗುವಾ
ಕಗ್ಗಡಲಿನಂತಲ್ಲ (ಜಡತನದ ಹೋಲಿಕೆಯು);
ಮಕ್ಕಳನು ಹೆತ್ತವರು ಹಿಗ್ಗಿ ನಲಿಯುವ ಹಾಗೆ!
ದಿನದಿನವು ಬೈಗಿನಡುಗೆಯ ಮುಗಿಸಿ ಗಿಡ್ಡಿ
ಕತೆ ಹೇಳುವಳು. ಬೈರ ಹಂಡನಾಯಿಯ ತಲೆಯ
ತಟ್ಟುತ್ತ ಕೇಳುವನು ಕಣ್ಬಿಟ್ಟು, ಬಾಯ್ದುಳೆದು,
ಬೆರಗಾಗಿ. ಗಿಡ್ಡಿ ಪಂಡಿತೆಯಲ್ಲ. ಕತೆಗಳವು
ಸಣ್ಣ ಕತೆಗಳ ಪಂದ್ಯದಲಿ ಗೆದ್ದು ಬಹುಮಾನ
ಪಡೆಯುವಂಥವು ಅಲ್ಲ. ಹಳ್ಳಿಯರ ಕಲ್ಪನೆಯು

ಹಳ್ಳಿಗರಿಗಾಗಿ ಕಟ್ಟಿದ ಕಟ್ಟುಗತೆಗಳವು.
ಜಗಕೆಲ್ಲ ಒಂದೆ ರಾಮಾಯಣವು ಎಂಬುದದು
ಹೆದ್ದಪ್ಪು. ಇಳೆಗೆಲ್ಲ ವಾಲ್ಮೀಕಿಯೊಬ್ಬನೇ
ಕವಿ ಎಂಬುದೂ ತಪ್ಪು. ತಿರೆಗೆಲ್ಲ ಶ್ರೀರಾಮ-
ನೊಬ್ಬನೇ ಎಂಬರೂ ಬೆಪ್ಪುಗಳೆ. ಹನುಮಂತ-
ರೆನಿತಿಹರು ಮಲೆಯ ಕಾಡುಗಳಲ್ಲಿ! ಒಂದೊಂದು
ಹಳ್ಳಿಯಲಿ ಒಬ್ಬೊಬ್ಬ ಜನವಂತನಾಗದಿಹ
ವಾಲ್ಮೀಕಿ ನೆಲೆಸಿಹನು. ರಾಮಾಯಣಗಳಂತೂ
ಲೆಕ್ಕಕ್ಕೆ ಮಿತಿಯಿಲ್ಲ. ಕಣ್ದೆರೆದು ನೋಡಿದರೆ
ತೋರಿ ಬರುವುದು ನಿಜವು. ಒಬ್ಬೊಬ್ಬ ಗಂಡನಲಿ
ಶ್ರೀರಾಮನಡಗಿಹನು; ಒಬ್ಬೊಬ್ಬ ಹೆಂಡತಿಯ
ಎದೆಯೊಳಿರುವಳು ಸೀತೆ. ಇಂತಿರಲು ವಾಲ್ಮೀಕಿ
ಬರೆದಿರುವ ರಾಮಾಯಣವು ಕೋಟಿ ಕಾವ್ಯಗಳ-
ಲೊಂದೆನ್ನಲತಿಶಯವೆ?

ಯಾರು ಅರಿಯದ ಮಲೆಯ-
ನಾಡಿನಾ ಮೂಲೆಯಲಿ ನಾಗರಿಕತೆಯ ಸುಳಿಗೆ
ಬೀಳದೆಯೆ, ಜಗದ ದೊಂಬಿಯ ಗಲಭೆಯನು ಕೇಳಿ
ಬೇಸರದೆ, ಸಂಸ್ಕೃತಿಯ ಸುಖದುಃಖಗಳಿಗೆಲ್ಲ
ದೂರಾಗಿ, ಸಿರಿಗೆ ಕರುಬದೆ, ಬಡತನಕೆ ಹೇಸಿ
ಗೋಳಿಡದೆ, ಅತಿಕಾಂಕ್ಷೆ ಅತಿಭೋಗ ಅತ್ಯಾಶೆ,
ಅತಿಗಳೊಂದಿಲ್ಲದೆಯೆ ಮಿತಿಯಿಂದ ಬಾಳಿದರು,
ಬದುಕಿದರು ಬೈರನೊಡಗೂಡಿ ಬಡ ಕರಿಸಿದ್ದ
ಗಿಡ್ಡಿಯರು. ಇಂತು ಬಾಳಿನ ಹೊನಲು ಹರಿಯುತಿರೆ,
ಒಂದು ದಿನ ಕರಿಸಿದ್ದ ಮೀನು ಹಿಡಿಯಲು ಕೆರೆಗೆ
ಬೈರನನು ಕೊಂಡೊಯ್ದ. ಹಂಡನಾಯಿಯು ಅವನ
ಜತೆ ಹೋಯ್ತು. ಕರಿಸಿದ್ದ ಮೀನು ಹಿಡಿಯುತಲಿರಲು
ಬಿಳಿಯ ಆವಲ ಹೂವ ಕುಯ್ಯಲೆಂದೆಳಸುತಿರೆ

ಕಾಲು ಜಾರಿದ ಬೈರ ಕೆರೆಯಲ್ಲಿ ಮುಳುಗಿದನು.
ಮುದಿಯಾದ ಕರಿಸಿದ್ದ ಬಾಯ್‌ಬಾಯಿ ಬಡುಕೊಂಡು
ಕೆರೆಯಲ್ಲಿ ಮುಳುಮುಳುಗಿ ಮಗನ ಮೇಲಕೆ ತಂದ.
ಹಂಡನಾಯಿಯು ಕೂಡ ಕೆರೆಗಿಳಿದು, ದಡಕಡರಿ
ಬೈರನನು ಮೂಸುತ್ತ ಬಾಲವಲ್ಲಾಡಿಸಿತು.
ಬೈರನಿಗೆ ಉಸಿರಾಡುತಿರಲಿಲ್ಲ. ನೀರ್ಕುಡಿದು
ಹೊಟ್ಟೆಯುಬ್ಬರಿಸಿತ್ತು. ಕಂಗೆಟ್ಟ ಕರಿಸಿದ್ದ
ತೋಟದಾಚೆಯ ಭೂತರಾಯನಿಗೆ 'ಅಡ್ಡಿದ್ದು'
ಬೇಡಿಕೊಂಡನು ಮಗನ ಕಾಪಾಡಬೇಕೆಂದು.
ರೋದನವ ಕೇಳ್ದೊಡನೆ ಗುಡಿಸಲಿಂದೋಡೋಡಿ
ಬಿದ್ದೆದ್ದು ಗಿಡ್ಡಿ ಬಂದಳು. ಬೆದರಿ, ನೋಡಿದಳು!
ಚೀತ್ಕಾರದನಿಮಾಡಿ, ಮುಡಿಗೆದರಿ ಗೋಳಾಡಿ,
ಮಣ್ಣೊರಚಿ, ಭೂತನನು ಬೈಯುತ್ತ, ಬೇಡುತ್ತ,
ಕಲ್ಲಿನಲಿ ತಲೆ ಕುಟ್ಟಿ, ಬಿದ್ದು ಬೈರನಮೇಲೆ
ಒರಗಿದಳು ದಣಿದು ತಟ್ಟಾಗಿ.

ಮಧ್ಯಾಹ್ನದಾ
ಬಿರುಬಿಸಿಲು ಬನ ಬೆಟ್ಟಗಳ ಮೇಲೆ ಮಲಗಿತ್ತು.
ತಿಳಿನೀಲಿಯಾಗಸದಿ ಬಿಳಿಯ ಮೋಡದ ಮಂದೆ
ಚಲಿಸದೆಯೆ ನಿಂತಿತ್ತು. ಏನು ತಿಳಿಯದ ಹಸುಳೆ
ಕಣ್ಣುಬಿಡುವಂತೆ ಕೆರೆ ಮುಗ್ಧತೆಯ ತೋರಿತ್ತು.
ಬೆಟ್ಟ, ಕಾನ್, ಮುಗಿಲು, ಬಾನ್, ಬಯಲು, ಕೆರೆ, ಮರ, ಬಳ್ಳಿ
ಎಲ್ಲಿ ನೋಡಿದರಲ್ಲಿ ಶ್ರೀ ಶಾಂತಿ ನೆಲೆಸಿತ್ತು.
ಹಂಡನೆದೆ, ಗಿಡ್ಡಿಯೆದೆ, ಸಿದ್ದನೆದೆಗಳು ಮಾತ್ರ
ತೋರಿದುವು ಬೇರೊಂದು ಲೋಕದಲ್ಲಿದ್ದಂತೆ!

ಯಮನ ಕರಣಿಕನಾಗ ಕಾಲದೋಲೆಯ ಮೇಲೆ,
ಚಿತ್ರಗುಪ್ತನು ಬರೆದು ಚಿತ್ರಿಸಿದನಿಂತೆಂದು:

ಪಾರ್ಲಿಮೆಂಟಿನಲೊಬ್ಬ ಭಾಷಣವ ಮಾಡಿದನು,
ವಂಗದೇಶದ ಕವಿಯು ನಾಟಕವನಾಡಿದನು.
ಹಿಮಗಿರಿಯ ಮೇಲೊಬ್ಬ ಸಾಧುವಾದನು ಸಿದ್ಧ!
ಜರ್ಮನಿಯ ದೇಶದಲಿ ನಡೆದಿದೆ ಮಹಾಯುದ್ಧ....
ಕುಪ್ಪಳಿಯ ಕೆರೆಯಲ್ಲಿ ಬೈರ ಹುಡುಗನು ಬಿದ್ದ....
ಮಡಿದವಗೆ ಮರುಗುವರು ಗಿಡ್ಡಿ, ಕರಿಸಿದ್ದ....
ಹಂಡನಾಯಿಯು ಮರುಗಿ ಕಣ್ಣೀರು ಕರೆದಿತ್ತು....
ಆಫ್ರಿಕದಿ ಕಂಬಿ ತಪ್ಪಿದ ರೈಲು ಬಿದ್ದಿತ್ತು....
ಕಾಶಿಯಲಿ ಹಾರುವರು ಹೇಳುತಿರುವರು ವೇದ....
ಚಿತ್ರಗುಪ್ತನಿಗಿದೆಯೆ ಮೇಲು ಕೀಳಿನ ಭೇದ?

———

# ಮರಸು ಬೇಟೆ

ಸಂಜೆ ಮರಸಿಗೆ ಹೊರಟ ತಂದೆಯು
"ನಾನು ಬಹೆನಪ್ಪಯ್ಯ ಕಾಡಿಗೆ"
ಎಂದು ಹಟಹಿಡಿದಳುವ ಕಂದಗೆ
ನುಡಿದನಿಂತೆಂದು :
"ಅಲ್ಲಿ ಹುಲಿಯಿದೆ ; ಹಂದಿ ಹಿಂಡಿದೆ ;
ಮುಳ್ಳು ಕಲ್ಲಿದೆ ; ಹಳುವು ಹಬ್ಬಿದೆ ;
ಸಣ್ಣವನು ; ಹೆಬ್ಬಾವು ಕಂಡರೆ
ಹಾಕುವುದು ತಿಂದು."

ಏಳು ವರುಷದ ರಸ್ನನವನು ;
ತುಂಬುದಾವರೆ ಕೆನ್ನೆಯವನು ;
ನೇರಿಳೆಯ ಕರಿಕಣ್ಣಿನವನು ;
ದುಂಬಿಗುರುಳವನು !
ಜೊಲ್ಲ ಸೂಸುವ ಕೆಂಪು ತುಟಿಯಲಿ,
ಮುದ್ದು ಮೋಹಿಪ ತೊದಲು ನುಡಿಯಲಿ,
ಕಂಡು ನಲಿಯುವ ತಂದೆಗೆಂದನು—
ಬರಿಯ ಹಟದವನು.

ಬೇಟೆಗಾರನು ಮುತ್ತು ಕೊಟ್ಟು,
"ಹಟವ ಹಿಡಿದರೆ ಕೊಡುವೆ ಪೆಟ್ಟು"
ಎಂದು ಕೋವಿಯ ಹೆಗಲೊಳಿಟ್ಟು
ಏರಿದನು ಬನಕೆ.
ಏರುತಿರೆ ತಾನೊಂಟಿಯಾಗಿ
ಹಿಂದೆ ಯಾರೋ ಬಂದ ಹಾಗೆ !
ತಿರುಗಿ ನೋಡಲು : ಗಾಳಿ, ತರಗೆಲೆ—
ಅಳುಕಿದೇಂ ಮನಕೆ ?

ತೂಗಿ ಮರದಲಿ ಗಾಳಿ ಸುಯ್ಯುಡೆ,
ಒಂದಕೊಂದಕೆ ತೀಡಿ ಮೆಳೆಯಲಿ
ಬಿದಿರು ಚೀರಿಡಲಡವಿ ನರಳಿತು
ರೋದಿಸುವವೋಲು.

ಹಾಡ ನಿಲ್ಲಿಸಿತಡವಿಹಕ್ಕಿ ;
ಬೈಗುವೆಳಗಳಿವನಿತರಲ್ಲಿಯೆ
ಇರುಳ ಹಣೆಯುಲಿ 'ಬೆಳ್ಳಿ' ಚುಕ್ಕಿ !—
ಏನು ಅದು ? ಕೇಳು !

ಯಾರೊ ಕೂಗಿದ ಹಾಗೆ ಅಲ್ಲವೆ ?
ಯಾರೊ ಗೋಳಿಟ್ಟಂತೆ ಅಲ್ಲವೆ ?
ಬಿದಿರು ಮೆಳೆಯಲಿ ಕೂಗಿತೇನೋ !—
ಏನು ಗಾಳಿಯಿದು !
ಬೇಟೆಗಾರನು ನಿಂತು ನೋಡಿ,
ಕಾಣದಿರೆ ಕಿವಿಗೊಟ್ಟು ಕೇಳಿ,
ಕೇಳದಿರೆ ನಿಃಶಂಕೆ ತಾಳಿ,
ನಡೆಯೆ—ಕಂಡಿತದು !

ಕಾಣೆ—ಹಣ್ಣಿನ ಮರದ ಮರಸದು
ಹತ್ತಿ ಕುಳಿತನು. ಸುತ್ತ ಕಾಡಿನ
ಮರದ ಕತ್ತಲೆ; ಕೆಳಗೆ ಹುಲುವಿನ
ಸಾಂದ್ರ ವಿಸ್ತಾರ.

ಮನಸು ದೃಷ್ಟಿಗಳೆಲ್ಲ ಪ್ರಾಣಿಯು
ಬರುವುದೊಂದನೆ ಚಿಂತಿಸುತ್ತಿರೆ
ಕೊಲೆಯ ಕೋವಿಯ ತಪದೊಳಿದ್ದನು
ಜಾಣ ಗುರಿಗಾರ !

ಕಾಯುತಿರೆ—ಅದೊ ಹಳುವಲುಗುತಿದೆ!
ಎತ್ತಿ ಕೋವಿಯನೆಳೆದು ಕುದುರೆಯ-
ನಿಟ್ಟು ಗುರಿಯನ್ನೊತ್ತೆ ಬಿಲ್ಲನು—
ಹಾರಲಿಲ್ಲೀಡು!
ಮತ್ತೆ ಕುದುರೆಯನೆಳೆದು, ಅಯ್ಯೋ,
ಬಿಲ್ಲನೊತ್ತಿದನಾದರೇಸಿದು?
ಎಂದು ಲೆಪ್ಪಸದಾ ತುಪಾಕಿಗೆ
ಇಂದಿದೇಂ ಕೇಡು!

ಕೇಪು ಕೆಟ್ಟಿದೆಯೇನು? ಅಥವಾ
ಕಿವಿಗೆ ಮುಸಿಯ್ಯೆತರದೆ? ಅಥವಾ
ಮಾಟ ಮಾಡಿಹರೇನು? ಅಥವಾ—
ಶಿವನೆ! ಶಿವ ಶಿವನೆ!
ಬೇಟೆಗಾರಗೆ ತನ್ನ ನರಸುತ
ಬರುವ ಕಂದನ ಕಂಡು ಹರಣವೆ
ಹಾರಿಹೋಯಿತು! ಹಳುವದಲಿ ಅದೊ
ಅವನೆ! ಹೌದವನೆ!

ಬೈದ ಕೋವಿಗೆ ಮಣಿದನೊಡನೆಯೆ!
"ಹೈದನುಳುಹಿದ ದೇವದೇವನೆ
ನೀನು!" ಎಂದದನಂದಿನಿಂದಲು
ಪೂಜೆ ಮಾಡಿದನು!
ಬೇಟೆಯನು ಕೈಬಿಟ್ಟನಂದಿಗೆ;
ತನ್ನ ಕಂದನ ಜೀವದಂತೆಯೆ
ಇತರ ಜೀವಗಳೆಂದಹಿಂಸೆಯ
ವ್ರತವ ಹೂಡಿದನು!

"ಕೇವು ಕೆಟ್ಟಿರಬೇಕು! ಅಥವಾ
ಮುಸಿಯು ಕೆಟ್ಟಿರಬೇಕು! ಅಲ್ಲದೆ
ಕೋವಿ ಕನಿಕರ ತೋರಬಲ್ಲುದೆ?
ನಿನಗೆ ಬರಿಹುಚ್ಚು!"
ಎಂದ ಮಂದಿಯು ಹಳಿದು ನುಡಿದನು:
"ನನ್ನ ಹಸುಳೆಯ ಪೊರೆದ ಕೋವಿ
ನನ್ನ ಪುಣ್ಯದ ಪರಮದೇವಿ!
ಹುಚ್ಚದುವೆ ಮೆಚ್ಚು!"

---

## ಘಂಟಾಕರ್ಣ

ಅವನಿಗೆ
ಘಂಟಾಕರ್ಣನು ಭಕ್ತ ಲಲಾಮನು ;
ಶಿವನಿಗೆ
ಕೇವಲ ಕಿಂಕರನಾಪ್ತ ಗುಲಾಮನು !
ಬೇರೆಯ ದೇವರ ಪೂಜೆಯ ಮಾಡನು ;
ಕಿವಿಯಲಿ ಕೇಳನು, ಕಣ್ಣಲಿ ನೋಡನು ;
ನಿಂದನೆಗಲ್ಲದೆ ಬಾಯಲ್ಲಾಡನು ;
ಹಳಿವನು ಹೃತ್ಪೂರ್ವಕವಾಗಿ.

ಬೇರೆಯ ದೇವರ ಭಕ್ತರ ಕಂಡರೆ
ಹಲ್ಲನು ಕಡಿವನು ಬಲು ರೇಗಿ ;
ಸುರಿವನು ಕೆಂಡದ ಮಳೆಯಾಗಿ !

ಹರಿ ಎಂದರೆ ಅವನಿಗೆ ಬರಿ ಬೊಂತೆ ;
ಹರನೆನೆ ಹಾಲಿಗೆ ಜೇನಿಳಿದಂತೆ !
ಬೊಮ್ಮನದಂತೂ ಕಚ್ಚಟ ಕಂತೆ ;
ಬೈವನು ಬಾಯಿಗೆ ಬಂದಂತೆ !

ಇಂತಿರೆ—
ಭಕ್ತನ ಭ್ರಾಂತಿಗೆ ಕನಿಕರ ತಾಳಿ
ಮೈದೋರಿದನಾ ದೇವ ತ್ರಿಶೂಲಿ !
"ಭಕ್ತನೆ, ಅದ್ವಯವಾಗಿಹ ಶಕ್ತಿ
ಒಂದಿದೆ ; ಅದನಾರಾಧಿಸೆ ಭಕ್ತಿ.
ಬ್ರಹ್ಮನು ಹರಿಹರರೆಂಬುವರೆಲ್ಲ
ಆ ಚೈತನ್ಯಕೆ ಬೇರೆಯರಲ್ಲ.
ಹರಿಗೆಂದರೆ ನೀ ನನಗೆಂದಂತೆ ;
ನನಗಿತ್ತರೆ ನೀನವಗಿತ್ತಂತೆ ;

ಎಲ್ಲ ನದಿಗಳೂ ಕಡಲಿಗೆ ಕೊನೆಗೆ;
ಎಲ್ಲ ಹಾದಿಗಳು ಒಂದೇ ಮನೆಗೆ;
ಸರ್ವ ಸ್ತೋತ್ರವೂ ತುದಿಯಲಿ ನನಗೆ;
ಇದನರಿತರೆ ಶಾಂತಿಯು ನಿನಗೆ!

ರೂಪವು ಬೇರೆ; ನಾಮವು ಬೇರೆ;
ಸಕ್ಕರೆ ತಿಂಡಿಯ ರುಚಿ ಬೇರೇನು?
ಜಲವೆನಲೇನು? ನೀರೆನಲೇನು?
ಸಂಸ್ಕೃತವೇನು? ಕನ್ನಡವೇನು?
ಬಾಯಾರಿದ ಮಾನವ ತಾ ಕುಡಿಯಲು
ತೃಷ್ಣೆಯು ನಿಲ್ಲುವುದಿಲ್ಲೇನು?

ನಿನ್ನ ದೇವರಿಗೆ ಪೂಜೆಯ ಸಲ್ಲಿಸು;
ಅನ್ಯದೇವರಾ ನಿಂದೆಯ ನಿಲ್ಲಿಸು;
ಸಮತಾ ಬುದ್ಧಿಯೆ ನನಗೂ ಪ್ರೀತಿ,
ಭಕ್ತನಿಗದೆ ಧರ್ಮದ ನೀತಿ!''

ಇಂತೆಂದನು ಆ ಪಿನಾಕಪಾಣಿ,
ಮಾರ್ನುಡಿದುದು ಆ ಭಕ್ತನ ವಾಣಿ:
''ಅಜಹರಿಗಳ ತಲೆಮೆಟ್ಟಿದ ದೇವ,
ಇಂದ್ರಾದ್ಯಮರರ ಕುಟ್ಟಿದ ದೇವ,
ದೇವರದೇವನೆ, ಸಮತೆಯು ನಿನಗೆ!
ನಿನ್ನನೆ ಪೂಜಿಪ ಬುದ್ಧಿಯು ನನಗೆ!
ಹರಿಯನು ಬೈವುದೆ ಹರನ ಮಹಾಸ್ತುತಿ!
ಹರಿನಾಮವ ಹಾಡಿದರದೆ ದುರ್ಗತಿ!
ಹರಿಹಾಳೆಂದರದೊಂದೇ ಬಾರಿ
ಹರಬಾಳೆಂದಂತೆನಿತೋ ಸಾರಿ!
ಮೃಡನೇ ಮುನಿದರೆ ಮುನಿ ನೀನು!
ದೃಢವೆನ್ನದು ಅದಬಿಡೆ ನಾನು!''

ಭಕ್ತನ ಮೊಂಡತನಕೆ ಬೇಸತ್ತು
ಹರ ಹೋದನು ಕೈಲಾಸಕ್ಕೆ.
ಘಂಟಾಕರ್ಣನೊ ತಾನೆಂದಿನವೊಲೆ
ಜೀವಿಸುತಿದ್ದನು ಶಿವನುಪದೇಶವ-
ನಿನಿತೂ ತಾರದೆ ಲಕ್ಷ್ಯಕ್ಕೆ!

ಇಂತಿರೆ ಮತ್ತೆ—
ಭಕ್ತಗೆ ಬುದ್ಧಿಯ ಕಲಿಸುವೆನೆಂದು
ನೆನೆದು ಮಹೇಶನುಪಾಯವನೊಂದು
ಮೈಯಲಿ ಹರಿಹರರೂಪವ ತಾಳಿ
ಮೈದೋರಿದನಾ ದೇವ ತ್ರಿಶೂಲಿ!
ಸುಂದರ ವಿಷ್ಣುವು ಮುಖವೊಂದರಲಿ;
ಭವ್ಯ ಮಹೇಶನು ಮತ್ತೊಂದರಲಿ!
ಒಂದೆಡೆ ರಾಜಿಪ ದಿವ್ಯ ಕಿರೀಟ;
ಮತ್ತೊಂದರಲಿ ಜಟಾಜೂಟ!
ಒಂದೆಡೆ ಮನಮೋಹಿಪ ವನಮಾಲಾ;
ಮತ್ತೊಂದೆಡೆ ರುದ್ರ ತ್ರಿಶೂಲ!
ಇಂತೆಸೆಯುತ್ತಿರೆ ತ್ರಿಭುವನ ವಂದಿತ
ಹರಿ ಹರ ರೂಪ,
ಸಂತೋಷದೊಡನೆ ಘಂಟಾಕರ್ಣಗೆ
ಮೂಡಿತು ಕೋಪ!
ಹರಭಾಗವ ಕಾಣಲು ಸಂತೋಷ;
ಹರಿಭಾಗವ ಕಂಡತಿರೋಷ!
ಸ್ತುತಿಗಿನ್ನೇಂ ಗತಿ? ಎಂತಹ ಕ್ಲೇಶ!
ಹೆದರಿಕೆ ಏನ್? ಅರೆ! ಇದೆ ಶ್ಲೇಷ!
ಶ್ಲೇಷ ಸಹಾಯದೊಳೊಂದೇ ಸ್ತೋತ್ರದಿ
ಹರಸ್ತುತಿಗೈದು, ಹರಿಯನು ಬೈದು,

ಹರಮುಖವಿದ್ದಾ ಪಕ್ಷಕೆ ನಮಿಸಿ,
(ಹರಚಂದ್ರನ ಹರಿದೋಷವ ಕ್ಷಮಿಸಿ)
ಫಲಪುಷ್ಪದಿ ಪೂಜೆಯ ಮಾಡುತಿರೆ!
ಧೂಪದ ಹೊಗೆಯನು ನೋಡಿದನು!
ಅಯ್ಯೋ ಗತಿಯೇನು!
ಏನದು ಏನು?

ಹೋದುದೆ ಹರಿ ಮೂಗಿಗೆ ಧೂಪದ ಹೊಗೆ?
ಹರವದನದೊಳದೊ ಪರಿಹಾಸದ ನಗೆ!
ಹರಭಕ್ತನು ಉರಿದೆದ್ದನು ರೇಗಿ,
ಆಘೋಷಿಸಿದನು ಕೂಗಿ:—
"ಪಾಪಿಯೆ, ಹರಗೆಂದಿಟ್ಟಾ ಧೂಪವ
ಆಘ್ರಾಣಿಸುವೆಯ? ಕೊಡುವೆನು ಶಾಪವ—
'ಹರನವರುರಿಸಿದ ಧೂಪದ ಚಕ್ಕೆ
ನಿನಗೆಂದಿಗು ಸಗಣಿಯ ಹೊಗೆಯಕ್ಕೆ!'"
ಎನ್ನುತ ರೋಷದೊಳಾಡನು ಕಚ್ಚಿ
ಹರಿಯಾ ಮೂಗನು ಹಿಡಿದನು ಮುಚ್ಚಿ!
ಆ ಹುಚ್ಚನು ನೋಡಿ
ಗಾಂಭೀರ್ಯವನೀಡಾಡಿ
ಹರಿಹರರಿಬ್ಬರೂ ನಕ್ಕೂ ನಕ್ಕೂ
ಕಣ್ಮರೆಯಾದರು ಗಗನವ ಹೊಕ್ಕು.
ನಾಡೊಳಗೆಲ್ಲಾ ಹಬ್ಬಿತು ಸುದ್ದಿ!
ಘಂಟಾಕರ್ಣನ ಭಕ್ತಿಯ ಬುದ್ಧಿ.
ಬಾಲಕರಾತನ ಹಿಂದೂ ಮುಂದೂ
ಆ ಶಿವಭಕ್ತನ ಪೀಡಿಸಲೆಂದು
"ಹರಿ ಹರಿ! ಹರಿ ಹರಿ! ಹರಿ ಹರಿ!" ಎಂದು
ಯದ್ವಾ ತದ್ವಾ ಕೂಗಿದರು!

ಹಿರಿಯರು ಕೂಡಾ ಹುಡುಗರ ಗೇಲಿಗೆ
　　ನಗುನಗುತಲೆ ತಲೆದೂಗಿದರು!
ಹರಭಕ್ತನು ಹರಿನಾಮುವ ಕೇಳಿ
ಸಹಿಸಲಾರದೆ ಜುಗುಪ್ಸೆಯು ತಾಳಿ
ಕರ್ಣಗಳೆರಡಕೆ ಘಂಟೆಯು ಕಟ್ಟಿ
　　ಮುಳುಗಿಸಿದನು ಹರಿನಾಮುವನು.
ಕಂಡದನೆಲ್ಲರು ಘಂಟಾಕರ್ಣಗೆ
　　ಹಾಕಿದರಾ ನವ ನಾಮುವನು!



655—36.— ಬೆಂಗಳೂರು ಸಿಟಿ ಬೆಂಗಳೂರು ಪ್ರೆಸ್ಸಿನಲ್ಲಿ ಸೂಪರಿಂಟೆಂಡೆಂಟರಾದ
ಜಿ. ಶ್ರೀನಿವಾಸರಾಯರವರು ಮುದ್ರಿಸಿರುವರು.

## ಕೆಲವು ಅಚ್ಚಿನ ತಪ್ಪುಗಳು

| ಪುಟ | ಪಂಕ್ತಿ | ಅಶುದ್ಧ | ಶುದ್ಧ |
|---|---|---|---|
| ೬೨ | ೧೧ | ಬೂತ | ಬೂತು |
| ೬೫ | ೧೯ | ಗಬ್ಬುಕೆ | ಗಬ್ಬುಕ- |
| ೭೦ | ೬ | ಭೀತಿಯುಬ್ಬೆಗಳಿಳಿದು.... | ಭೀತಿಯುಬ್ಬೆಗವಳಿದು.... |
| ೮೧ | ೨೧ | ಸವತಿತಾಯಿ ಮತ್ತೂ | ಸವತಿತಾಯಿ ಸಿಡುಕಿ ಮತ್ತೂ |
| ೮೩ | ೭ | ಮಾರಿ | ಮಾದಿ |
| ೮೩ | ೧೧ | ಕರಿಯ ಕೂದಲು ಹಂದಿ | ಕರಿಯು ಕೂದಲು ; ಹಂದಿ, |
| ೮೪ | ೨ | ಹೊರಟೆದ್ದಿತು ; | ಹೊರಟಿದ್ದಿತು ; |
| ೮೪ | ೨೧ | ಚಿತ್ರಗಳನ್ನು | ಚಿತ್ರಗಳನು |
| ೮೫ | ೧೫ | ಆಪ್ಪಿದಸ್ಥಿಪಂಜರವೆರಡು | ಅಪ್ಪಿದಸ್ಥಿಪಂಜರೆರಡು |
| ೮೭ | ೨೨ | ಮೂಗಿನವರೆವಿಗು | ಮೂಗಿನ ವರೆಗೂ |
| ೮೭ | ೨೫ | '' ವೇಗದಿ ಬಂದಿತು.... | ಎಂಬಲ್ಲಿಂದ ಬೇರೆ ಪದ್ಯ |
| ೯೮ | ೭ | ಲೆಪ್ಪನದಾ | ' ಲಪ್ ' ಎನದಾ |